**ಕೊಲೆ kole.** killing, murder, slaughter (ಮಾರಣ, ನಿಶರಣ, ಘಾತಕ, ಕದನ, ಹಿಂಸೆ, etc., Hlā.; ವಿಶಸನ, etc. Mr. 300; ಹಿಂಸೆ Śm. 51; ಕೋಶ Nn. 52; ಕರಣ 108; ಹಿಂಸೆ 118; ವಧ 132; ಹರಣ 165; C.; Tu.; T. ಕೊಲೈ, ಕೊಲ್ಲಿ). ನ್ಯಾಯದ ಕೊಲೆ (Śmd. 64 Mdb.). see Abh. P. 10, 94; Bp. 53, 44; Rāghc. 17, 66; J. 2, 5; 12, 47; 28, 30. 40; ಕಾಲ್ಗೊಲೆ, ಕೆಯ್ಗೊಲೆ, ಕೊರಲ್-, ಬಾಯ್-, ಮೆಯ್-. — ಕೊಲೆಗಡಿಕ. -ಕಡಿಕ. a man who butchers life, a murderer (J. 13, 22). — ಕೊಲೆಗಡಿಗ. -ಕಡಿಗ. = ಕೊಲೆಗಡಿಕ. (Bh. 6, 4, 109; J. 31, 47). — ಕೊಲೆಗೆಡುಕ. -ಕೆಡುಕ. a destroyer of life, a murderer (ಘಾತುಕ, ಹಿಂಸ್ರ, ಕ್ರೂರ Nr.). — ಕೊಲೆಗೆಲಸ. -ಕೆಲಸ. murderous acts, murder (Rām. 6, 31, 6). — ಕೊಲೆಗೊಳ್. -ಕೊಳ್. to undertake or commit murder (Rām. 3, 7, 33). [— ಕೊಲೆಪಡು. to be killed. ಈ ಕೊಲೆಪಡುವಾತನರಸರ ಗೋಮಣ್ಡಳಮಂ ಕಾವೊಂ ವೀರಪೂರ್ಣನೆಮ್ಬೊಂ Vr. 22, 1]. — ಕೊಲೆಪಾತಕ. in law: manslaughter (My.).

**ಕೊಲೆಗ kolega.** = ಕೊಲೆಗಾಱ. (My.).

**ಕೊಲೆಗಾಱ kole-gāṟa.** a murderer (My., S. Mhr. rare). (Rām. 6, 12, 4).

**ಕೊಲ್ಲಟಿಗ kolḷ-aṭiga.** (Śmd. 240). a player with sticks, a pole-dancer, a rope-dancer (ಡೊಮ್ಬ Kk. 38; Śm. 59; T. ಕೋರಮ್ಬ; Mhr. ಕೋಲ್ಹಾಟ್ಟೀ). ಗಟಿಯೆನ್ನು, ಕೊಲ್ಲಟಿಗರ್ ಆಡುವುದು ಅಕ್ಕುಂ (Śmd. I). [ಗೆಲ್ಲ ಸೋಲದ ಮತ್ಸರ ಕೊಲ್ಲಟಿಗಂಗಲ್ಲದೆ ಶಿವಭಕ್ತರಿಗುಣ್ಟೆ ಅಯ್ಯಾ Cv. 360].

**ಕೊಲ್ಲಟಿಗಿತ್ತಿ kollaṭiga-itti.** a female pole-dancer, who performs various feats (ಬಹುರೂಪಿಣಿ Ct. II, 91).

**ಕೊಲ್ಲಣಿಗೆ kol-aṇige.** (Śmd. 25). playing, play, performance (ಆಡುವದು Śm. 61; ಎಡೆಯಾಡುವದು Kk. 51, o. r. ಆಡುವದು). see Bh. 1, 8, 94; 3, 4, 40.

**ಕೊಲ್ಲಾರ kollāra.** = ಕೊಲ್ಲಾರಿ, ಕೊಲ್ಲಾರು. a cart to which oxen, etc. are yoked. (Bh. 9, 2, 43).

**ಕೊಲ್ಲಾರಿ kollāri.** = ಕೊಲ್ಲಾರ, etc. (Bh. 10, 4, 11).

**ಕೊಲ್ಲಾರು kol=kolike-āru6.** = ಕೊಲ್ಲಾರ, etc. a cart to which oxen, etc. are yoked. — ಕೊಲ್ಲಾರ ಬಣ್ಡಿ. = ಕೊಲ್ಲಾರು. (J. 7, 5; Te. ಕೊಲಾರುಬಣ್ಡಿ, ಕೊಲ್ಲಾರು-).

**ಕೊಲ್ಲಿ kolli.** = ಕೊಲ್ಲೆ. a bend, a curve; a corner, a nook; a gulf, a bay (My.; M. ಕೊಲ್ಲಿ, ಕೊಳ್ಪು; T. ಕೋಡಿ). — ಕೊಲ್ಲಿಪಾಕೇಶ. N. (Rsv. 1, 53. 56).

**ಕೊಲ್ಲಿಸು kollisu.** = ಕೊಲಿಸು. (C.; B. 2, 19; 4, 9. 80; 5, 108; Prv. s. ನಿಲ್ಲು).

**ಕೊಲ್ಲು kollu.** = ಕೊಲು 1, etc. to kill, etc. P. p. ಕೊನ್ದು. ಕೊಲ್ಲುವದು (ಪ್ರಮಾಪಣ, ಮಾರಣ, ಪ್ರತಿಘಾತನ, ಕ್ರಥನ, ವಧ, etc. Si. 297). ಕೊಲ್ಲುವ ಸ್ವಭಾವವುಳ್ಳವನು (ಶರಾರು, etc. 360). ವಿಷದಿನ್ದ ಕೊಲ್ಲತಕ್ಕವನು (ವಿಷ್ಯ 365). ಯಜ್ಞದಲ್ಲಿ ಕೊಲ್ಲಲ್ ಪಟ್ಟ ಪಶು (ಉಪಾಕೃತ 241). ಕೊನ್ದಡಂ ಕೊಲ್ಲಲಿ! (Bp. 13, 25). ಹಲ್ಲು ನಾಲಿಗೆಯಿಲ್ಲ, ಸೊಲ್ಲು ಸೋಜಿಗಮಲ್ಲ, ಕೊಲ್ಲದೆ ಹಿಡಿಯುವುದು ಲೋಕದೊಳಗೆಲ್ಲ ಚಾವಿನೊಳು (a net, Sp.). ಸಾಯ ಕೊಲ್ಲ ತಕ್ಕವನು (ವಧ್ಯ, ಶೀರ್ಷಚ್ಛೇದ್ಯ); ಒನಿಕೆಯಿನ್ದ ಸಾಯ ಕೊಲ್ಲಲ್ ಪಡ ತಕ್ಕವನು (ಮುಸಲ್ಯ Si. 365). ಸಾಯ ಕೊಲ್ಲುವದಕ್ಕೆ ಮಾಡಿದ ಮನ್ತ್ರತನ್ತ್ರಪ್ರಯೋಗ (393). ನೊನ್ದವಗೆ ನೋಯಿಸಿದರೆ ಕೊನ್ದ ಪಾಪವಲ್ಲವೇ? — ಕೊನ್ದ ಪಾಪಾ ತಿನ್ದು ಪರಿಹಾರ (Prvs.).

**ಕೊಲ್ಲುವಿಕೆ kolluvike.** killing (ಸಾಧನ, ಮಾರಣ Si. 437).

**ಕೊಲ್ಲೆ kolle.** (fr. ಕುಡು 3). = ಕೊಲ್ಲಿ. the state of being bent, etc. (ವಕ್ರ Kk. 74).

**ಕೊಲ್ಸು kolsu.** = ಕೊಲಿಸು. ನಲ್ಲ! ಎನ್ನ ಮುಡಿಗೆ ಪಡಿ ಅದು (ನವಿಲ್)! ಕೊಲ್ಸದಿರು! (Rāghc. 17, 71).

**ಕೊವರಿ kovari.** Tbh. of ಕುಮಾರಿ. daughter, girl, etc. (My.).

**ಕೊವ್ವರಿ kovvari.** = ಕುವರ 2, etc. a curtain, veil, etc. (ಮುಸುಕು Ct. I, 33, o. r. ಕವ್ವರ).

**ಕೊಸಗು kosagu.** the tree Pterospermum acerifolium Willd. (ವೃಕ್ಷೋತ್ಪಲ, ಕರ್ಣಿಕಾರ Hlā.; Mr. 114; ದ್ರುಮೋತ್ಪಲ, ಕರ್ಣಿಕಾರ, ಪರಿವ್ಯಾಧ Nr.; ಬೆಟ್ಟದಾವರೆ, ಕರ್ಣಿಕಾರವೃಕ್ಷ Ss.; ಬೆಟ್ಟದಾವರೆ Ct. II, 42; ಮರದಾವರೆ, ಬೆಟ್ಟದಾವರೆ Śm. 25; Kk. 19). [ಕೊಸಗಿನ ಕೇಸರಂಗಳನನ್ವಿತ ರಸದೊಳಂ ಶೃಂಗಾರ ರಸದೊಳಂ ಭಾವಿಸಿ Pb. 4, 75 va.; Ap. 12, 39]. see Cpr. 7, 56; 7, 92 va.

**ಕೊಸಮ್ಬರಿ kosambari.** = ಕುಸುಮ್ಬರಿ, etc. a kind of vegetable salad (S. Mhr.).

**ಕೊಸರಿಕೆ kosarike.** hankering after, desire (Rām. 6, 12, 30); charm (6, 61, 24).

**ಕೊಸರು kosaru. 1.** to become excessive, as wrath, to spread, as a sore (My.; Rām. 3, 7, 30; Te. ಕೊಸರಲು, to abound); to become overbearing: to disentangle oneself forcibly from the hold of another (S. Mhr.). ಆ ಕುದುರೆ ಕೊಸರಿಕೊಣ್ಡು ಓಡಿ ಹೋಯಿತು (B. 4, 79).

**ಕೊಸರು kosaru. 2.** to hanker or be agog, to be greedy, to desire (My.; Grj. 2, 106 va.; Te.; *cf.* ಕುದಿ 1); to demand an article gratis or into the bargain (My.; Te.). ಕೊಣ್ಡರೆ ಇಲ್ಲ, ಕೊಸರಿದರೆ ಬನ್ದೀತೇ? (Prv.). (Rām. 6, 45, 28).

**ಕೊಸರು kosaru. 3.** eagerness, lust, cupidity (Te.); anything that is asked for and generally given in boot when a person buys commodities (C.; Te.; Tu. ಕುಸುರಿ; T. ಕೊಸುಱು). ಕೊಸರುಕೊಟ್ಟು ಬದುಕಿದವರಿಲ್ಲ, ಮೊಸರು ಮಾಱಿ ಕೆಟ್ಟವರಿಲ್ಲ (Prv.).

**ಕೊಸಾಕುಳಿ kosākuḷi.** = ಕುಸಾಕುಳಿ. trouble, etc. (My.).

**ಕೊಸೆ kose. 1.** to embrace sexually (ನಿಧುವನಕರಣ Śmd. Dh.; My.; M. ಕೊಟ್ಟು; *cf.* ಸುಸಿಲ್; Sk. ಕುಟ್ಟಾರ, sexual intercourse, see s. ಕೂಟ). P. ps. ಕೊಸೆದು, ಕೊಸ್ತು (My.). — ಕೊಸ್ವಾಟ. -ಆಟ. sexual embrace (My.).

**ಕೊಸೆ kose. 2.** a way of mounting (or riding?) a horse (ವಾಹಾರೋಹಭೇದ Śmd. Dh.). [ಹಯದೊಡಮ್ಬಡು ವಂಚನೆ ಕೇಣಮಾಸನಂ ಕೊಸೆದೆಸೆ Pb. 10, 77. — ಕೊಸೆಗೊಳ್. -ಕೊಳ್. to ride on, to mount upon. ಚೆಲ್ವನಿಳಾರಾಮಾರಮಣನಱ್ತುಯಿಂ ನೋಡುವಿನಂ ಸಾರಥಿ ಕಣ್ಣಱಿದೊಯ್ಯನೆ ತೇರಂ ಕೊಸೆಗೊಣ್ಡು ಚಕ್ರಿಯಂ ಬಿನ್ನವಿಕುಂ Ap. 11, 57].

**ಕೊಸೆ kose. 3.** the penis. (ಶಿಶ್ನ according to the late Srīnivāsa Śāstri; Te.; the tip or end). 2, = ಬಲ or ಕೊಬ್ಬು (according to the same authority).

**ಕೊಳ್ koḷ. 1.** = ಕೊಳು 1, ಕೊಳ್ಳು 1. to seize; to lay hold of; to take away; to take; to accept; to make one's own; to take for one's own use or benefit; to take or mean as a satisfaction, or benefit, to oneself; to obtain,

to meet with success; to buy; to undertake (ಗ್ರಹಣ Śmd. Dh.; M.; Tu. also ಕೊರು, to give; T. ಕೊಳ್, ಕೊಳ್ಳು; Te. ಕೊನು); as the second member of a compound also: to get, gain, obtain, acquire, hold on, etc., see *e. g.* ಅಸುಂಗೊಳ್, ಎಱಕು ಳಿ-, ಒಲವರಂ-, ಓಜೆ-, ಕಣ್-, ಕೂಸ್ತು-, ಕೆಯ್ಕೊಳ್, ಗಡಣಂಗೊಳ್, ಗುಣಂಗೊಳ್, ದೊರೆಕೊಳ್, ನೆಱ-, ಬೞ-, ಬಿಲ್ಕೊಳ್, ಬೆಂ-, ಮನಂ-, ಮಾರ್ಕೊಳ್; ತಱುವಾಯಿಗೊಳ್, ನೆಲೆ-, ಭಯಂ-, ಮುಂಕೊಳ್, etc., etc. [Kr. 5, 175. ಕೂರದರ್ ನೆಲನನೊಟ್ಟೆಜೆಯಿಂ ಕೊಳೆಕೊಟ್ಟು Pb. 7, 55; Ap. 1, 62]. P. p. ಕೊಂಡು [ಚಾಗದ ಕಮ್ಬಮುಂ ನಿಱಿಸಿ ಬೀರದ ಶಾಸನಮುಂ ನೆಗೞ್ಚಿ ಕೋಳ್ಕೊೞಗದ ಮಣ್ಡಲಂಗಳನೆಕೊಂಡು Pb. 1, 50]; (Śmd. 287. 292); relative present participle ಕೊಮ್ಬ (*e. g.* Bp. 2, 19; 43, 81; 53, 13; 60, 57). ಕೊಳಲ್ ಎಮ್ಬ ಕ್ರಿಯೆಯೊಳ್ ಕುಳಂ (Śmd. I). ಕೊಳಲ್ ಸಾರ್ದಂ (86). ಈ ಕ್ರಮದಿನ್ ಅಱಿದು ಕೊಳ್ಗೆ! (131). ಕೊಳ್ಳೆಂ, ಕೊಳ್ಳೆವು, ಕೊಳ್ಳದೆ (87). ಪಱಗನ್ನಡದ ಪುದುಂಗೊಳೆ (78). ಸವಣಂ ಬಳಪಂಗೊಳೆ, ಗಾಣ್ಡಿವಿ ಬಿಲ್ಕೊಳೆ, ಬಲವಿರೋಧಿ ವಜ್ರಂಗೊಳೆ, ದಾನವರಿಪು ಚಕ್ರಂಗೊಳೆ, ಕೌರವಾರಿ ಗದೆಗೊಳೆ, ಪೊಣರ್ಕೆಗೆ ಆವಂ ನಿಲ್ವಂ? (200). (see also 224. 281. 288). [ಜಗವೆಲ್ಲ ಕಾಮ್ಬುಕಣ್ಣು ತನ್ನ ಕೊಮ್ಬ ಕೊಯಿಲೆಯ ಕಾಣಲಱಿಯದು Bv. 123]. ಒನ್ದ ಕೊಟ್ಟು ಒನ್ದ ಕೊಮ್ಬುದು (ಪರಿದಾನ, ಪರಿವರ್ತ, etc.); ಕೊಣ್ಡ ಬೆಲೆ (ನೀವಿ, ಪರಿಪಣ, ಮೂಲಧನ Nr.). ಮುಸುಡನ್ ಉದ್ದಮ್ ಎತ್ತಿ ಕೊಣ್ಡು ಇರ್ಪನವನು (ಉತ್ಪಶ್ಯ Hlā.). ಕಳದು ಕೊಮ್ಬಾತನು (ಗೃಹಯಾಲು, ಗೃಹೀತೃ); ಸಾಲವ ಕೊಡುವವನೂ ಸಾಲವ ಕೊಮ್ಬವನೂ ಇಬ್ಬರೂ ಉತ್ತಮರ್ಣ ಎನ್ದೂ ಅಧಮರ್ಣ ಎನ್ದೂ ಎನಿಸುಗು; ಮದ್ಯವ ಕೊಮ್ಬ ಠಾವು (ಶುಣ್ಡಾಪಾನ); ತನ್ನ ಹೆಟ್ಟಿಗೆಗೆ ಕೇಡ ಮಾಡಿ ಕೊಳ್ಳದೆ ಇರುಹ (ಸ್ವಾನ); ವಸಿಷ್ಠ ಪುತ್ರ ಶೋಕದಿನ್ದ ಕೊರಳಲ್ಲಿ ಕಲ್ಲ ಕಟ್ಟಿಕೊಣ್ಡು ಬಿದ್ದರೆ ನೂಱು ತೆಱನಾದ ನದಿ (ಶತದ್ರು); ಮಾಡಿಕೊಣ್ಡ ನಣ್ಪನು (ಸಖ್ಯ); ಮಾಱಿ ಕೊಮ್ಬವನು (ಕ್ರಾಯಕ); ಮಾಱಿ ಕೊಮ್ಬ ವಸ್ತು (ಕ್ರೇಯ); ಹೊದ್ದು ಕೊಮ್ಬ ಸೀರೆ (ಪ್ರಾವಾರ Nr.). ತನ್ದೆಗೆ ಜನಪರ್ ಉಣ್ಬು ಓಲಯಿಸ್ಸಿ ಕೊಮ್ಬರೆ (Bh. 1, 8, 60). ಪರರರ್ಥವ ಸೆಳೆದುಕೊಮ್ಬ ಪಾತಕತನಂ (Jmt. 22). ಜಗತ್ಪ್ರೇರಕಂ ನೀನ್ ಇರಲ್, ಕೊಡುವರ್ ಕೊಮ್ಬರು ಮರ್ತ್ಯರೇ? (Sś. 42). see Abh. P, 11, 170 va.; Grj. 1, 111; 3, 78; 5, 15; 10, 64. 105; Bp. 5, 52; 14, 23; 21, 30; 29, 17; 39, 50; 40, 72; 42, 3; 45, 20; 54, 38; 57, 41; 58, 38; 60, 14. 22; Abh. P. 13, 61; Bh. 1, 8, 2; 2, 13, 10; Rām. 3, 7, 34; Rśv, 5, 125. 133; Śśv. 4, 39; J. 3, 24; 8, 2; 28, 16. 33. 58; 24, 4; 29, 23; 30, 42; 31, 26; 33, 25. remarks: *a*, very often, especially in vulgar language, ಕೊಳ್ (ಕೊಳು, ಕೊಳ್ಳು) is added to the P. p. of other verbs often *quite pleonastically*. *b*, when ಕೊಳ್ (ಕೊಳು, ಕೊಳ್ಳು) is added to the P. p. of causative verbs, occasionally *the idea of the passive voice* is nearly expressed, *e. g.* ತಲೆಯನ್ ಅರಿಸಿಕೊಳಲ್ ತಕ್ಕವನು (ಶೀರ್ಷಚ್ಛೇದ್ಯ); ಕಟ್ಟಿಸಿಕೊಣ್ಡವನು (ಬದ್ಧ); ನೂಕಿಸಿ ಕೊಣ್ಡವನು (ಅಧಿಕ್ಷಿಪ್ತ); ಬಯ್ಸಿ ಕೊಣ್ಡವನು (ಅಭಿಶಸ್ತ); ಗರ್ವವ ಮುಱಿಸಿಕೊಣ್ಡವನು (ಆತ್ತಗರ್ವ, ಅಭಿಭೂತ); ಹೞಿಸಿ ಕೊಮ್ಬುವನು (ಗಹ್ರ್ಯಾಧೀನ; ಚಮ್ಮಟಿಗೆಯಿನ್ದ ಹೊಡಸಿಕೊಳಲ್ ತಕ್ಕವನು (ಕಶಾರ್ಹ, ಕಶ್ಯ Nr.). an instance with ಕೊಳು: ಶಾಸ್ತ್ರ ಕ್ರಮದಿನ್ದ ಅಭಿವಾದನಂ ಮಾಡಿಸಿಕೊಳುವಾತನು (ಉಪಸಂಗ್ರಾಹ್ಯ Hlā.). similar instances are frequent in S. Mhr. and My. — ಕೊಳ್ಕೊಳ್. rep. to take and take, etc. ಕೊಳ್ಕೊಳ್ಳೆನ್ದು, ಒಡನೊಡನೆಯೆ ತುಳ್ಕುವ ಯುವತಿಯರ ಕರಪರಿಚ್ಯುತಸಲಿಲಂಗಳ್ ಕೊಳೆ ಬಿಡೆ ಕೆದಱುವ ಕಿಂಜಲ್ಕದಿನ್ ಆದುದು ಸರೋವರಂ ಕಪಿಶಜಲಂ (Śmd. 272). ಅಹಿಗಳ್ ಆಹಾರಮಂ ಕೊಣ್ಡು ಕೊಣ್ಡು (J. 8, 2). — ಕೊಣ್ಡಾಟ. -ಆಟ. praise (ಪ್ರಶಂಸೆ Śmd. Dh. Cm.; ನುತ Nn. 154; ಸ್ತೋತ್ರ, etc. Mr. 86; My.; Cpr. 8, 33). — ಕೊಣ್ಡಾಡಿಸು. -ಆಡಿಸು. to cause to praise (Bp. 36, 43; My.). — ಕೊಣ್ಡಾಡು. -ಆಡು. to lay hold of one mentally and speak: to praise, to extol; to respect highly, to reverence (ಅತ್ಯಾದರ Śmd. Dh.; ಪೊಗೞ್ 366 Cm.; C.; *cf.* ಬಿಟ್ಟಾಡು, which is the contrary). [ತಮ್ಮಾಳ್ದನುಮನಿಷ್ಟದೈವಮುಮಂ ಕೊಣ್ಡಾಡುವನ್ತಯ್ಯರುಮಂ ಕೊಣ್ಡಾಡೆ Pb. 3, 31 va.; Ap. 3, 72 va.]. ಕೊಣ್ಡಾಡಲ್ ಪಟ್ಟ (ವಿನುತ 92 Cm.). ಕೊಣ್ಡಾಡಲ್ ಪಟ್ಟದು (ಈಡಿತ, ಶಸ್ತ, ಪಣಾಯಿತ, ಪ್ರಣುತ, ವರ್ಣಿತ, ಸ್ತುತ, etc., ಹೊಗೞಲ್ ಪಟ್ಟದು Si. 384). ಅರಸುಗಳ ಕಾರ್ಯ ಗುಣಂಗಳನೆ ಕೊಣ್ಡಾಡುವವನು (ವನ್ದಿ, ಸ್ತುತಿಪಾಠಕ Nr.). see Grj. 10, 105; Bp. 4, 66; 12, 3; 18, 7; 47, 39; 55, 4; Bh. 2, 13, 29; Rām. 26, 20; Śśv. 1, 80; 4, 48; J. 7, 63; 13, 32. 44; 29, 34. — ಕೊಣ್ಡಾಡುವಿಕೆ. -ಆಡುವಿಕೆ. praising; praise (ಸ್ತುತಿ Si. 419). ಸುಗುಣಗಳನ್ನು ಕೊಣ್ಡಾಡುವಿಕೆ (ಸ್ತವ, ಸ್ತೋತ್ರ, ಸ್ತುತಿ, ನುತಿ 56). — ಕೊಣ್ಡುಬರ್. -ಬರು. to bring (Bp. 23, 34; 32, 42; 41, 10; 59, 11; My.). — ಕೊಣ್ಡು ಹೋಗು. to take or convey away (Bp. 23, 39; My.). — ಕೊಣ್ಡೊಯ್. -ಒಯ್. to take and carry away, to convey, etc. (Abh. P. 10, 58; Bp. 9, 22; 14, 25; 16, 30. 31; 17, 22; 18, 7; 20, 7; 22, 7; 25 sum.; 34, 19; 42 sum.; 42, 39; 54, 71; 57, 4; 60, 18; J. 4, 2. 14. 22). — ಕೊಣ್ಡೊಯಿ. -ಒಯಿ. = ಕೊಣ್ಡೊಯ್. (Bp. 44, 69).

**ಕೊಳ್ koḷ. 2.** = ಕೊಳು 2, etc., ಕೋಳ್, ಕೋಳು. seizing, preying; taking. — ಕೊಳ್ಕೊಡೆ. = ಕೊಳು ಕೊಡೆ. taking and giving [ವರ್ಣ ಸಂಕರಮಾಗಲೀಯದೆ ತಮ್ಮ ತಮ್ಮ ಜಾತಿಗಳೊಳ್ ನಣ್ಪುಮಂ ಕೊಳ್ಕೊಡೆಯುಮಂ ನಿಯೋಜಿಸಿ Ap. 8, 64 va.]; (Abh. P. 4, 98. 101; 5, 14). — ಕೊಳ್ಮಿಗ. = ಕೊಳ್ಮೃಗ. (ವ್ಯಾಲ Nn. 74, o. r. ಕೊಲುವ ಮೃಗ; Śśv. 3, 47). — ಕೊಳ್ಮೃಗ. a beast of prey (ವ್ಯಾಲ Mr. 486; Abh. P. 7, 95). ವಿಷಮಸಿಂಹಂ ವ್ಯಾಘ್ರಶೂಕರವೃಷಾದಿಮೃಗಂ ಕೊಳ್ಮಿಗಮ್ ಎನಿಕ್ಕುಂ (Mr. 166).

**ಕೊಳ್ koḷ. 3.** = ಕೊರಲ್, etc. the neck, etc. — ಕೊಳ್ಪಟ್ಟಿ. = ಕೊರಳುಪಟ್ಟಿ. (My.). — ಕೊಳ್ಹಱಿ. -ಹಱಿ. the neck-rope of a bullock to break (My.).

***ಕೊಳ್ koḷ. 4.** to bite. ಆ ಇರುಳೊಳೆ ಪಾವು ಕೊಳೆ ಸತ್ತು Vr. 12, 8.

**ಕೊಳ koḷa. 1.** a place of assignation, an appointed place (ಸಂಕೇತಸ್ಥಲ Śmd. II; ಕೊಮ್ಬು Ct. I, 68; ಪಸ, ಕೊಮ್ಬು, ಸಂಕೇತಸ್ಥಲ Kk. 94).

**ಕೊಳ koḷa. 2.** = ಕೊಣ 1, ಕೊಳಹೆ. a hold, a pond (ಕಾಸಾರ, ಸರಸಿ Mr. 417; ಸರಸಿ 36; Śm. 36; My.; T., M., Tu. ಕುಳ; Te. ಕೊಲ). [ಕೊಳನಂ ಪೊಕ್ಕು ಕಾಲವಂಚನೆಗೆಯ್ಯಲಿರ್ದನಕ್ಕುಮೆನ್ದು Pb. 13, 76 va.; Ap. 1, 67]. ಕೊಳನು (ಕಾಸಾರ, ಸರಸಿ, ಸರಸ್ಸು Nr.; Hlā.; ಶರ, ಸರೋವರ Nn. 35; ಪದ್ಮ, ಸರ 54). ಕೊಳಂಗಳ್ (Śmd. 117). ಕೊಳನೆ! (152). ಚಿನ್ನೆಯ್ದಿಲ್ಗೊಳಂ (216 Mdb.). see Grj. 9, 69; Bp. 37, 33; 49, 43; 50, 1. 58; Bh. 2, 13, 28; Rśv. 5, 38; 6, 2; 12, 22; Śśv. 3, 42; C. Bp. 14, 4; J. 3, 3. 4; 7, 8; 15, 9. 10. 33; ತಂಗೊಳ, ತಣ್-, ತಾವರೆ-, ತಿಳಿ-, ಪೂ-. — ಕೊಳಗಾಹಿ. -ಕಾಹಿ. the watchman of a tank (Bh. 3, 10, 52). — ಕೊಳಗೊಳ್. -ಕೊಳ್. to form a pond [ನೆತ್ತರುಜ್ಜಳಿಸಿ ರಥಂಗಳೊಳ್ ಕೊಳಗೊಳುತ್ತಿರೆ ಕಾದಿದರೊರ್ವರೊರ್ವರೊಳ್ Pb. 12, 76; ಸೋರ್ದುದು ಕೊಳಗೊಣ್ಡ ಗರ್ವರಸಮಾ ಭರತೇಶ್ವರ ಚಕ್ರವರ್ತಿಯಾ Ap. 13, 71]; (Cpr. 1, 94). — ಕೊಳದ ಹಕ್ಕಿ. a crane (ಪುಷ್ಕರಾಹ್ವ, ಸಾರಸ Si. 174). — ಕೊಳನ ಮೇಘ. (a colour resembling) a cloud reflected in a pond (Bp. 11, 24).

**ಕೊಳ koḷa. 3.** = ಕೊಳಗ 1, etc. a measure of capacity. see ಮೂಗೊಳ.

**ಕೊಳಕೆ koḷake.** = ಕೊಳ್ಕೆ. the third crop of rice (My.; Tu. ಕೊಲಕೆ, ಕೊಳಕೆ). ಕುಪ್ಪನ ನಮ್ಬಿ ಕೊಳಕೇ ಬಿತ್ತಿದೆ, ಕುಪ್ಪ ಓಡಿ ಹೋದ, ಕೊಳಕೆ ಹೊತ್ತಿ ಹೋಯಿತು (Prv.).

**ಕೊಳಗ koḷaga. 1.** = ಕುಳ 1, etc. a measure of capacity: 4 baḷḷas (My.; ಆಢಕ Sl. 329; ಶಾಖ Mr. 206; Tu.; M.; T. ಕುಳಗ; *cf.* Sk. ಕುಲಿಜ). [ಉದಯಾಸ್ತಮಾನವೆಮ್ಬ ಕೊಳಗದಲ್ಲಿ ಆಯುಷ್ಯವೆಮ್ಬ ರಾಸಿಯುನಳೆವರು Cv. 888]. ಆಢಕಿ ಎನ್ಬೊಡೆ ಕಿಱಿಯ ಕೊಳಗವು (Nr.). see Mr. s. ಪಾಗ and ಖರ್ವ; Bp. 1, 23; 23, 37; 33, 13; J. 34, 28; Prv. s. ತಾಯಿ; ನಾಗೊಳಗ. 2, a large metal water-vessel (S. Mhr.). 3, (= ಕೊಪ್ಪು 2 ?), an ornament for the ear (C. Bp. 47, 44). — ಕೊಳಗದಪ್ಪಲೆ. -ತಪ್ಪಲೆ. = ಕೊಳಗ No. 2. (My.).

**ಕೊಳಗ koḷaga. 2.** = ಕೊಣಗು, ಕೊಳಗು, ಗೊರಸು. the hoof of a beast, whether cloven or not (C.; B. 5, 12. 24; T., M. ಕುಳಮ್ಬು; T. also ಕುಳಗು).

**ಕೊಳಗು koḷagu.** = ಕೊಳಗ 2, etc. (ಶಫ, ಖುರ Nr.; Rśv. 13, 96; Śśv. 3, 45; B. 1, 21). ಕುದುರೆಯ ಕೊಳಗು (ವರ್ತಕ); ಹುಲ್ಲೆಯ ಚರ್ಮ ಕೊಳಗು ಮೊದಲಾದವು ಐಣೇಯ ಎನಿಸುಗು (Nr.). ಆವಿನ ಕೊಳಗು (ಆಂಗೊಳಗು Śm. 33).

**ಕೊಳಗುಳಿಕೆ koḷa-kuḷike.** = ಕೊಳುಗುಳಿಕೆ q. v., ಕೊಳವಂಕೆ, ಕೊಳವಳಿಕೆ, ಗೊಳಗೊಳಿಕೆ. a spiny herb, growing in watery places, Barleria longifolia Lin. (Asteracantha longifolia Nees.; ಇಕ್ಷುರಕ Mr. 132; *cf.* ಕೋಕಿಲಾಕ್ಷ).

**ಕೊಳಂಜ koḷañja.** = ಕುಲಂಜನ, etc. a kind of plant. (ಕುಷ್ಠ, ಮಂಜಿಷ್ಠ, ಮಧುಕ, ವಾಪ್ಯ, ವಿಕಷೆ, ವ್ಯಾಧಿ G.).

**ಕೊಳಂಜನ koḷañjana.** = ಕೊಳಂಜ. (ಆಪ್ಯ, ಉತ್ಪಲ G.).

**ಕೊಳಂಜು koḷañju.** = ಕೊಳಂಜನ. (ಯೋಜನಪರ್ಣಿ, ಯೋಜನವಲ್ಲಿ G.).

**ಕೊಳರ್ koḷar.** the fragrant Andropogon grass (?); horripilation (?). ಕೊಳರೆನೆ ಲಾಮಂಚವಪ್ಪುದು (Ct. I, 53, o. r. ಕೊಳರೆನೆ ಲೋಮಾಂಚವಪ್ಪುದು). — ಕೊಳರ್ವಕ್ಕಿ. -ಪಕ್ಕಿ. N. of a bird (Grj. 9, 69; Bh. 3, 10, 53; J. 17, 25).

**ಕೊಳವಂಕೆ koḷa-paṅke.** = ಕೊಳಗುಳಿಕೆ, etc. a kind of herb. (ಇಕ್ಷುಗನ್ಧ, ಕಾಣ್ಡೇಕ್ಷು, ಕೋಕಿಲಾಕ್ಷ, ಕ್ಷುರ, ಇಕ್ಷುರ, ಗೊಲುಮಿಡಿ Si. 147; My.).

**ಕೊಳವಳಿಕೆ koḷa-paḷike.** = ಕೊಳಗುಳಿಕೆ. (St. & Pl.; My.).

**ಕೊಳವಿ koḷavi.** ? (Śmd. 247).

**ಕೊಳವೇರ್ koḷa-bēr.** = ಕುರುವೇರ್. the root of the fragrant grass Andropogon muricatus (ಲಾಮಜ್ಜ, ಲಾಮಚ Śmd. II; ಲಾಮಂಚ Kk. 22; ಲಾಮಚ 85; ಬಾಳ, ಲಾಮಜ್ಜ Śm. 27; V. 4, 24; *cf.* Sk. ಹ್ರೀವೇರ). ಕೊಳವೇರ್ಗಳ ಕೇರ್ಗಳ್ (Rśv. 10, 31 va.).

**ಕೊಳಹೆ koḷahe.** = ಕೊಳ 2, etc. a hold; a pond. (ವೇಶನ್ತ, ಪಲ್ವಲ, ತಲ್ಲ Hlā.; Mr. 417).

**ಕೊಳಿ koḷi.** = ಕುಳಿ. holding, seizure. see ನೀಳ್ಕೊಳಿ.

**ಕೊಳಿಕೆ koḷike.** = ಕೊಲಿಕೆ, etc. a clasp, hook, etc. (My.).

**ಕೊಳಿಸು koḷisu. 1.** = ಕೊಳ್ಳಿಸು. to cause to seize, etc. (My.). see ಅನುಗೊಳಿಸು, ಅಸುಂ-, ಎರ್ದೆ-, ಒಪ್ಪು-, ಕಣ್-, ಕೆಯ್-, ಪದ-, ಪುದು-, ಪುದುಂ-, etc. etc. [— ಕೊಳಿಪಂ. one who causes to seize. ಕಳಿಪಂ ಕಳ್ವನಗುರ್ವುಪರ್ವೆ ಕೊಲಿಪಂ ಕೊಲ್ವಂ ಪರಸ್ತ್ರೀಯರಂ ಕೊಳಿಪಂ Ap. 5, 81].

***ಕೊಳಿಸು koḷisu. 2.** to cause to bite. ಪಾವುಗಳಂ ಕೊಳಿಸಿ ... ಮಡುವಿನೊಳಱಿದರ್ Pb. 2, 32.

**ಕೊಳಿಸುವಿಕೆ koḷisuvike.** causing to seize, etc. see ಅಪಲಾಪಗೊಳಿಸುವಿಕೆ, ಗೇಲಿ-, ಜೊತೆ-, ತಡೆ-, ನಿರ್ಬನ್ಧ-, ಪ್ರಕಾಶ-, ಸಮಾಧಾನ-, ಸಾಯ-.

**ಕೊಳು koḷu. 1.** = ಕೊಳ್ 1, etc. to seize; to take hold of; to take, etc. (C.; Bp. 27, 24. 79). ಶಾಸ್ತ್ರ ಕ್ರಮದಿನ್ದ ಅಭಿವಾದನಂ ಮಾಡಿಸಿ ಕೊಳುವಾತನು (ಉಪಸಂಗ್ರಾಹ್ಯ Hlā.).

**ಕೊಳು koḷu. 2.** = ಕುಳ 2, etc., ಕೊಳ್ 2. seizing; taking; buying; cost-price. ಕೊಳುಮೊದಲಿನ್ದ ಅಧಿಕವಾಗಿ ಮಾಱುದುದು (ಅಧಿಕಫಲ, ಲಾಭ Nr., o. r. ಕುಳುಮೊದಲಿನ್ದ-). — ಕೊಳು ಕೊಡೆ. = ಕೊಳ್ಕೊಡೆ. taking and giving (Rām. 1, 16, 25. 33). — ಕೊಳುಗುಳ. -ಕುಳ. seizing and seizing: a fight, a war (ಬಣ್ಡಣ Ct. I, 28; ಆಹವ II, 62; ಬಣ್ಡಣ, ಜುದ್ದ, ಮೊನೆ, ಪೊಣರ್, ಕಾಳಗ Śm. 39; Kk. 41; ಕಾಳಗ Bhn.). [ಒಬ್ಬ ಕ್ಷತ್ರಿಯ ಕುಮಾರ ಹುಟ್ಟಿ ಕಿಗ್ಗಡಲ ರಕ್ತದ ಹೊನಲಲಿ ಕಡಿದು ಮುಳುಗಾಡುವ ಕೊಳುಗುಳವ ಕಣ್ಡು ಪರಿಣಾಮಿಸುವನ್ತೆ Bv. 705]. see Rśv. 6, 132 va.; Śśv. 2, 52; Bh. 2, 2, 78; J. 7, 51; 9, 17; 13, 55; 17, 30.

***ಕೊಳುಕ್ koḷuk.** the term of interjection to indicate a feeling of shock. ಮನಂ ಕೊಳುಕೆನೆ ಮುಱುಗಿ ನೆಗೆದ ಹರಿಯಂ ನುಡಿದಂ Pb. 11, 112.

**ಕೊಳುಗುಳಿಕೆ koḷu-kuḷike.** = ಕೊಳಗುಳಿಕೆ, etc. a kind of herb. (ಇಕ್ಷುಗನ್ಧ, ಕಾಣ್ಡೇಕ್ಷು, etc. Nr., o. r. ಕೊಳ-; My.).

**ಕೊಳುಹ koḷuha.** seizing, etc. (ಕ್ರಯ Mr. 346). ಒನ್ದ ಕೊಟ್ಟು ಒನ್ದ ಕೊಳುಹವು (ಅಪಮಿತ್ಯಕ); ಇದಿರೆದ್ದು ಈಸಿ ಕೊಳುಹ (ಅಭಿಹಾರ, ಅಭಿಗ್ರಹಣ); ಕಳಿಮ ಕೊಳುಹ (ಗ್ರಹ, ಗ್ರಾಹ); ಕಳದು ಕೊಳುಹ (ಆದಾನ, ಪರಿಗ್ರಹ); ಕಾನ್ತನ ಕೂಡೆ ತೊಡಿಗೆ ತೊಡಿಗೆಗಳಂ ತಾನು ಕರಿಸಿ ಕೊಳುಹ (ಲೀಲೆ); ಪರರಿಗೆ ಕೇಡ ಮಾಡಿ ತನಗೆ ಲೇಸು ಮಾಡಿ ಕೊಳುಹ (ವೃದ್ಧಿ); ಬೆಸನ ಹೇಱಿಸಿ ಕೊಳುಹ (ಅನುಜ್ಞೆ); ಬೇಡಿ ಕೊಳುಹ (ಪ್ರಾರ್ಥನ); ಅಪ್ಪಿ ಕೊಳುಹ (ಆಲಿಂಗನ, etc. Nr.). see ಆಱಗೊಳುಹ, ಎಟಿಕುಳಿ-, ಕೆಯ್ಕೊಳುಹ, ನಣ್ಬುಗೊಳುಹ, ಬೆಸ-, ಮೊದಲ್-.

**ಕೊಳ್ಕೆ koḷke.** = ಕೊಳಕೆ. third crop of rice. (My.).

***ಕೊಳ್ಗುದಿ koḷgudi.** grief generated. (ಕೊಳ್+ಕುದಿ). ಕೊಳ್ಗುದಿ ಮನದಿನ್ದಮಿನ್ದು ಪೊಱಮಾಱುಗೆ Pb. 5, 18.

***ಕೊಳ್ಗುಳ koḷguḷa.** = ಕೊಳುಗುಳ. a fight, etc. ಕೊಳ್ಗುಳಮಂ ಗಣ್ಡುಮನಪ್ಪುಕೆಯ್ಗೆ Pb. 9, 90; Vr. 188, 14.

**ಕೊಳ್ಪು koḷpu.** = ಕೊಪ್ಪು 1. the notched extremity of a bow. (Abh. P. 5, 86).

**ಕೊಳ್ಳ koḷḷa. 1.** a deep place, a depth, the clift of a rock, a cave, etc. (C.; ನಿಕುಂಜ, ಗಹ್ವರ Hlā.; Mr. 97). ಬೆಟ್ಟಮಂ ಗಟ್ಟಮಂ ಹಳ್ಳಮಂ ಕೊಳ್ಳಮಂ (Śmd. 130). ಬೆಟ್ಟದಲ್ಲಿ ಹಳ್ಳ ಕೊಳ್ಳಗಳು ತೋಱದೇ ಸಮನಾಗಿ ಕಾಣಿಸುವ ಪ್ರಾನ್ತ (ಪ್ರಸ್ಥ, ಸಾನು Si. 115). see Bh. 2, 4, 10; Rāghc. 17, 56; B. 3, 100; 5, 129. see Mr. s. ತಲ್ಲ.

**ಕೊಳ್ಳ koḷḷa. 2.** = ಕುಳ್ಳ. s. ಕುಳ್ಳು 2. N. (R.; T. ಕೊಳ್ಳ, a short man, dwarf).

**ಕೊಳ್ಳಿ koḷḷi.** = ಕೊಳ್ಳೆ 1. a fire-brand (ಅಲಾತ, ಉಲ್ಮುಕ Nr.; Hlā.; Mr. 47; Si. 308; ಉಲ್ಕೆ Si. 484; C.; B. 2, 26; M.; Tu.; Te. ಕೊಱವಿ; T. ಕೊಳ್ಳಿ, ಚುಳ್ಳು; T., M. ಕೊಳುತ್ತು, to make to catch; to kindle; Te. ಕೊರಲು, to blaze, shine; see ಕತ್ತು 2). [ಆಜಿಗೆ ಜೆಟ್ಟಿಗರಾಗಿ ಕೊಳ್ಳಿವೀಸಿಸುಗೆ Pb. 10, 32]. ಕೊಳ್ಳೀ ತೆಗದುಕೊಣ್ಡು ತಲೇ

ತುಱುಸಿ ಕೊಂಡ್ಡಂತೆ.—ಮಕ್ಕಳಿಲ್ಲದವರಿಗೆ ಕೊಳ್ಳಿ ಎಲ್ಲಿಯದು (for the childless who is to set fire to the funeral pile). — ಹಳ್ಳೀ ದೇವರಿಗೆ ಕೊಳ್ಳಿ ದೀಪ. — ಮುಳ್ಳು ತೆಗೆದು ಕೊಳ್ಳಿ ಹೆಟ್ಟಿದ ಹಾಗೆ (Prvs.). see ಉರಗೊಳ್ಳಿ, ಕಡೆ-, ಕೆಯ್-, ಕೊಱಕೊಳ್ಳಿ, ಪಱಿಗೊಳ್ಳಿ; Prvs. s. ಬೆಳ್ಳಿ. — ಕೊಳ್ಳಿದೆವ್ವ. an ignis fatuus (My.). — ಕೊಳ್ಳಿಪಿಶಾಚಿ. = ಕೊಳ್ಳಿದೆವ್ವ. (My.).

**ಕೊಳ್ಳಿಸು kollisu.** = ಕೊಳಿಸು. (C.).

**ಕೊಳ್ಳು kollu. 1.** = ಕೊಳ್ 1, etc. to seize, to take, etc. (C.). P. p. ಕೊಣ್ಡು; infinitive and imperative sing. also ಕೊಽ (C.); present participle also ಕೊಽತ (C.). ಕೊಳ್ಳು! (Bp. 28, 10). ಕೊಳ್ಳುವವನು (ಕ್ರಾಯಿಕ Si. 324). ಕೊಳ್ಳುವದಕ್ಕೆ ಆಗಿ ಅಂಗಡಿಯಲ್ಲಿ ಇಡಲ್ ಪಟ್ಟದು (325). ನಂಜಿ ಕೊಳ್ಳತಕ್ಕದು (ಅವದಂಶ 347). ನೀನು ಪುಸ್ತಕ ಕೊಳ್ಳ ಬೇಕು (B. 1, 23). ಕುದುರೆಯನ್ನು ಕೊಳ್ಳಲಿಕ್ಕೆ (2, 33). ತನ್ದೆ ಅವನಿಗೆ, ಏನಾದರೂ ಕೊಣ್ಡು ತಿನ್ನು! ಎನ್ದು, ನಾಲ್ಕು ದುಡ್ಡು ಕೊಟ್ಟನು (3, 62). ಈ ರೊಕ್ಕಾ ಕೊಟ್ಟು ಏನು ಕೊಳ್ಳಬೇಕು? (3, 62). ಅಂಗಡಿಗೆ ಹೋಗಿ ತಿನ್ನಲಿಕ್ಕೇನಾದರೂ ಕೊಳ್ಳುವ! (4, 43). ಮಂಗಗಳನ್ನು ಹಿಡಿದು ಮನೆಯೊಳಗೆ ಇಟ್ಟುಕೊಣ್ಡರೆ (1, 13). ಕೊಳ್ಳುವವನಿಗೂ ಕೊಡುವವನಿಗೂ ಸ್ವತನ್ತ್ರವಿರ ಬೇಕು (5, 84). ಮಾಱೋಣ ಕೊಳ್ಳೋಣ (ಕ್ರಯವಿಕ್ರಯ 5, 113). ಕೊಣ್ಡ ಹಾಗೆ ಮಾಱಿದರೆ ಉಣ್ಡ ಊಟಕ್ಕೆ ಮಾರ್ಗವೇನು? — ಕೊಣ್ಡೋರಿಗೆ (*i. e.* ಕೊಣ್ಡವರಿಗೆ) ಕೊಟ್ಟೋರಿಗೆ ಕೋಟಿ ಲಾಭವೆನ್ನುವನ್ತೆ (Prvs.). — ಕೊಣ್ಡುಕೊಳ್ಳು. = ಕೊಳ್ಳು. to buy (C.; B. 1, 23).

**ಕೊಳ್ಳು kollu. 2.** = ಕೊರಳು. neck, etc. (My.).

**ಕೊಳ್ಳುವಿಕೆ kolluvike.** taking, etc. ಬಹಳ ಅಱಿಚಿ ಕೊಳ್ಳುವಿಕೆ (ಘೋಷಣೆ Si. 56). see 252. 262. 265. 388; ಅನುತಾಪಗೊಳ್ಳುವಿಕೆ, ಕಸು-, ಕೆಚ್ಚು-, ಹಗೆ-.

**ಕೊಳ್ಳೆ kolle. 1.** = ಕೊಳ್ಳಿ. a firebrand. (ಉಲ್ಕೆ, ನಿರ್ಗತಜ್ವಾಲೆ Nr.).

**ಕೊಳ್ಳೆ kolle. 2.** pillage, plunder (My.; Tu.; T. ಕೊಳ್ಳೈ, ಕೊಣ್ಡೆ; Te. ಕೊಲ್ಲ). see Bp. 58, 44; Si. 295. 391. ಕೊಳ್ಳೆಯವರು ಕೊಳ್ಳೆಗತ್ತರು, ಸೂಱೆಯವರು ಸೂಱೆಗತ್ತರು (Prv.). ಕೊಳ್ಳೆ ಮಾಡು, ಕೊಳ್ಳೆ ಹೊಡೆ, to plunder (My.).

**ಕೊಳ್ಳೆಗಾಱ kolle-gāra.** a plunderer (My.).

**ಕೊೞ್- kol.** = ಕೊಗ್-. the state of being putrid or pap-like. — ಕೊೞ್ಗಿಸಱ್. -ಕೆಸಱ್. putrid, soft mud; a pap-like substance, paste (Abh. P. 12, 3; 13, 54 va.; Rsv. 5, 120 va.; V. 7, 7). — ಕೊೞ್ಮಿದುಳ್. pap-like brain (Abh. P. 13, 74. 81; 14, 7).

**ಕೊೞಕು kolaku.** the state of being worn out, decayed, rotten, putrid, stinking, etc.; the state of being languished, pined away, etc.; that is putrid, etc. (C.). [Tu. ಕುರಿ]. ಕೊೞಕ ಮಾಂಸ (B. 3, 100). ಕೊೞಕ ಅಱುವೆ (C.). ಕೊೞಕ ಹಣ್ಣು (C.). ಕೊೞಕ ನಾತ (C.). ಕೊೞಕು ನಾಱುವ ದುರ್ವ್ರಣಂಗಳು (Bp. 40, 70). ಶರೀರದ ಕೊೞಕು (My.; ಕಿಟ್ಟ, ಮಲ Si. 205). — ಕೊೞಕ. -ಅ 3. (Śmd. 241 Mdb.). a dirty man (My.); a worn out, withered, decrepit man (S. Mhr.). — ಕೊೞಕಿ. a dirty woman (My.); a worn out woman (S. Mhr.). — ಕೊೞಕುಮಣ್ಡಲ. the (puffing) chain viper, Daboia elegans (My.). — ಕೊೞಕು ಮೂಗು. a rotten nose (Dp. 59, 1).

**ಕೊೞಕುತನ kolakutana.** putrescence, filthiness (My.).

**ಕೊೞಚಿ kolaci.** = ಕೊಜ್ಜೆ, ಕೊೞಚೆ. the state of being putrid, impure, stinking, pap-like, soft, or muddy; soft mud. ಕೊೞಚೀ ಮೇಲೆ ಹೆಜ್ಜೆ ಹಾಕಿ ಮೋಱೀ ಮೇಲೆ ಸಿಡಿಸಿ ಕೊಣ್ಡ (Prv.). ಕೊೞಚಿದಾರಿ, ಕೊೞಚಿ ನೀರು (S. Mhr.).

**ಕೊೞಚೆ kolace.** = ಕೊೞಚಿ. (My.). ಕೊೞಚೆನೀರು (Bh. 5, 3, 56; 7, 6, 50). ನಿರ್ಮಲಿಲ್ಲದ ಮನಸು ತಾ ಕೊೞಚೆಹೊಲಸು (Dp. 54).

**ಕೊೞತು kolatu.** = ಕೊೞೆತು. P. p. of ಕೊೞೆ 1.

**ಕೊೞಮ್ಬು kolamba.** hindrance (S. Mhr.; see s. ಕುೞ 1).

**ಕೊೞಲ್ kolal. ಕೊೞಲು.** (fr. ಕೊಡೆ2). = ಕೊೞವಿ, ಕೋವಿ. a hollow tube; a flute, a fife (ವೇಣುವಾದ್ಯ Śmd. I; C.; Tu. ಪುಳಲ್; T. ಕುೞಲ್, hollowness; a flute; ಕುಯಿಲ್, anything hollow; see also ಕುೞು 1). see Bp. 12, 42; 58, 23; Bhāgavata 10, 18, 11. ಕೊೞಲನೂದುವವ (ವೇಣುಧ್ಮ G.; My.). ಕೊೞಲು ಹಿಡಿವವ (ಮುರಲೀಧರ G.; My.). — ಕೊೞಲುಗೋೞಿ. -ಕೋೞಿ. the ruddy crake, Porzana fuska (Bd.).

**ಕೊೞವಿ kolavi.** = ಕೊೞಲ್, ಕೊೞವೆ, ಕೊೞಾಯಿ, ಕೊೞಿವಿ, ಕೋವಿ. a tube, a blow-pipe, especially a bamboo tube, used to blow fires with, and when having a bottom, as a vessel to keep oil, etc. in; a tubular stalk (ಧಮನಿ Mr. 207; S. Mhr.; Te. ಕೊಳುವು, ಕೊಳಿವೆ; Tu. ಕೊಲವೆ, ಕೊಳವೆ; T. ಕುೞಾಯ್). ಕಾಡಿಗೆಯ ಕೊೞವಿ (ಅಂಜನಿ Mr. 337). ನೂಲುಕಡಿಕೆಯನಿರಿಸಿ ನೇಯುವ ಕೊೞವಿ (ವೇಮ, ವಾಯದಣ್ಡ Si. 343 sic!). ಹಾಸಿನ ಕೊೞವಿ (S. Mhr.). ತಾವರೇ ಬಳ್ಳಿಯ ಕೊೞವಿಗಳು (ಮೃಣಾಲ, ಬಿಸ Si. 96). ಕಾಜಿನ ರಸವನ್ನು ಕೊೞವಿಯ ತುದಿಗೆ ಹಚ್ಚಿ, ಊದಿ (B. 4, 225). see ಜೀರ್ಕೊೞವಿ. — ಕೊೞವಿಹೂಟೆ. ಕೊೞವಿಹೂಟೆದ ಮಿಣಿ (ಅನುಕರ್ಷ Si. 277).

**ಕೊೞವೆ kolave.** = ಕೊೞವಿ, etc. a tube, etc. (My.). — ಕೊೞವೆಹುೞು. = ವಜ್ರಕೀಟ (My.).

**ಕೊೞಸು kolasu.** = ಕೊೞಿಸು. to cause to decay, to rot (C.).

**ಕೊೞಾಯಿ kolāyi.** = ಕೊೞವಿ. (My.).

**ಕೊೞಿವಿ kolivi.** = ಕೊೞವಿ, etc. ಒನ್ದು ಉದ್ದನ್ನ ಕೊೞವಿ (ಸೊಣ್ಡಿ) ಆನೆಯ ಮೋಱೆಯ ಮೇಲಿರುತ್ತದೆ (B. 5, 238).

**ಕೊೞಿಸು kolisu.** = ಕೊೞಸು. (My.).

**ಕೊೞೆ kole. 1.** to wear out (v. i.); to decay, as a corpse; to rot, as fruit, fibres, wood, etc.; to spoil, as corn; to become putrid; to grow pap-like (ಜೀರ್ಣಿಸು Śmd. I; ಮಲಮಱು I, o. r. ಮಲಮೋಱು; ಜೀರ್ಣ Śmd. Dh.; C.; B. 4, 54. 132; Tu. ಕುರಿಪು, ಕುಳಿಪು; T. ಕುೞೈ, to become like pap, be soft; M. ಕುೞೆ. to be macerated, kneaded, mixed as pap; ಕುಡುಮ್ಬು, ಕುಯುಮ್ಬು, ಕುಶುಮ್ಬು, to rot, decay; see ಕುಮುಟು, ಕುಸುರಿ 1; T. ಕೂೞ್, ಕೂೞೈ, what is rotten; mire; pap; boiled rice); to pine away on account of grief; to wither; to become lean (S. Mhr.; B. 5, 128; T., M.; *cf.* Sk. theme ಕೂಟ್); to be disappointed or baffled (? ಮನಮಿಗು Śmd. I, o. r. ಮನವಿಕ್ಕು; see ಕುೞ 1). P. ps. ಕೊೞೆತು, ಕೊೞತು. ರೋಗದಿನ್ದ ಕೊೞತು ನೀರು ಸುರಿಯುವ ಕಣ್ಣುಗಳುಳ್ಳವನು (ಚುಲ್ಲ, ಚಿಲ್ಲ, ಪಿಲ್ಲ Si. 202). ಒಕ್ಕಲಿಲ್ಲದ ಊರು ಕೊೞೆತು ನಾಱುವ ನೀರು (Dp. 54). ಕೊೞತ ಹೆಣಗಳು (B. 3, 85). ಕೊೞತ ಕುಮ್ಬಳಕಾಯಿಗೆ ಕೆಟ್ಟ ತೆಂಗಿನ ಕಾಯಿ (Prv.). ರೋಗದಿನ್ದ ಕೆಯ್ ಕೊೞತವನು (ಕುಣಿ G.). [— ಕೊೞೆನಾಱ್. to emit bad smell. ಉಗುರ್ವಿನ ಕೊೞೆನಾರ್ಪ ಕೋೞ್ಕೆಸಱ ಬಾವಿಯೊಳರ್ದೆ ಕಡಂಗಿ Ap. 2, 43].

see ಔಕ

**ಕೊಱೆ koḷe. 2.** anything worn out, rotten, putrid, corrupt, filthy or foul; excretion of the body; dirt; impurity; mud (ಮಲ, ಪಾಪ, ಅಮೇಧ್ಯ, ಕಿಟ್ಟ Si. 456; ಕಾಯ ಮಲ Śmd. Dh.; My.; Tu. ಕುರೆ). ಕೊಱೆಯಾದದು (ಮಲಿನ, ಕಚ್ಚರ Si. 368). ನೀರು ಮೇಲೆ ಮುಚ್ಚುವ ಕೊಱೆಯ ಹಾಚಿ (ಶೈವಾಲ 95). ಕೊಱೆಯುಳ್ಳ ಬಟ್ಟೆ (ನಕ್ತಕ, ಕರ್ಪಟ 223). ಮೆಯ್ಯ ಕೊಱೇ ಹೋಗ ಲಾಡಿಸು (225). see Prv. s. ಮೊದಲು. 2, = ಕೊಱಿಮ್ಟು. hindrance; detention. — ಕೊಱೆಮಚ್ಚೇ ಹುಣ್ಣು. (ಕೋಠ, ಮಣ್ಡಲಕ Si. 200). — ಕೊಱೆಸಕ್ಕದ. (Śmd. 78). impure or corrupt Samskṛita (see s. ಮೆಱಿಸು). — ಕೊಱೆ ಹಾಕು. to rot (v. t.), to expose to a process of marceration (My.). 2, to detain, stay or stop (My.). ನನ್ನನ್ನು ಕೊಱೆ ಹಾಕಬೇಡ (My.).

**ಕೋ ka2 or ke1-ō3. 1.** = ಕೊ, etc., ಗೋ. lo! behold! see ಇಕೋ, ಇಕ್ಕೋ.

**ಕೋ kō. 2.** an imperative singular of ಕೊಳ್ಳು1. *e. g.* ತಕೋ. see Bp. 1, 15; 44, 9. 10. 14; 49, 9; 51, 9; 52, 36; 53, 17; 58, 30; B. 5, 132. 2, an infinitive of ಕೊಳ್ಳು1 (C.). see B. 4, 137. 195. 201. — ಕೋ ಕೋ! rep. (Bp. 15, 34).

**ಕೋ kō. 3.** to string (pearls, beads, etc.) upon a thread, to thread (ಸೂತ್ರಪ್ರವೇಶ Śmd. Dh.; Abh. P. 10, 222; T., M. ಕೋ, ಕೋರ್; Te. ಕೋವೆ, ಕ್ರೋಡೆ, ಕ್ರೋವೆ, T. ಕೋವೈ, ಕೋವೈ, a string of beads, etc.; *cf.* ಕೋಸು 1). P. p. ಕೋದು, ಕೋತು (Dp. 55, 1). [ಮುತ್ತುಂ ಮೆಱಿಸುಂ ಕೋದನ್ತಕ್ಕುಂ Kr. 2, 5; ಮುತ್ತುಂ ಮೆಱಿಸುಂ ಕೋದನ್ತುಟೆ ನಿನ್ನ ತಪದ ಪಾಂಗು Pb. 7, 92]. ಮುತ್ತುಂ ಮೆಱಿಸುಂಗೋದನ್ತಿರೆ (Śmd. 78). ಅಲ್ಲಿಗಲ್ಲಿಗೆ ಒನ್ದೊನ್ದು ಕೆನ್ದಾವರೆಯ ಎಸಳ್ಗಳಿಂ ಕೋದು ಕೊಸಗಿನ ಎಸಳ್ಗಳಿಂ ಬೀದಿಗಟ್ಟಿ ಪೊಸಯಿಸಿ ಮನಕ್ಕೆ ಪದವನೀವ ನವಪದಂಗಳ್ (Cpr. 7, 92 va.). ಅಮರದತ್ತನುಂ ವರರುಚಿಯುಂ ಭಾಗುರಿಯುಂ ಗೋಪಾಲಿತನುಂ ಮೊದಲಾದ ಶಾಸ್ತ್ರಂಗಳತ್ತಣಿನ್ದಂ ಶಬ್ದಂಗಳೆಮ್ಬ ರತ್ನಂಗಳ ಮಾಲೆ ಕವಿಗಳ ಕೊರಳಿಂಗೆ ಅಲಂಕಾರ ಮಾಗಿ ಕೋಯಲ್ ಪಟ್ಟಿಹುದು (Hlā.). 2, to be threaded; to be entered (ಪವಣಿಗೆ ಅಪ್ಪುದು Śmd. 398 Cm.). ಅನ್ತು ಇನ್ತುಗಳ್ ಪದಾಪೂರಣದೊಳ್ ಕೋವುವು (398). see Śsv. 2, 64. 68.

**ಕೋಕ kōka.** *a wolf* (ವನಾಶ್ವ, ತೋಳನು Nn. 128; ತೋಳ Mr. 522). 2, *the ruddy goose, Anas casarca* Gm. (ಚಕ್ರಯುಗ, ಜಕ್ಕವಕ್ಕಿ 128; ರಥಾಂಗ 522; ತೊಣೆವಕ್ಕಿ Ct. II, 109). 3, a frog (ಭೇಕ, ಕಪ್ಪೆ 128; ಭೇಕತತಿ 522). 4, the date tree (ಖಜೂರ್ರ 128; ಖರ್ಜೂರ 522). 5, N. of another tree (ತರು, ಮರಗಳ ಭೇದ 128; ಕ್ಷಿತಿಜ 522). 6, an elder sister (ಜ್ಯೇಷ್ಠೆ, ತನ್ನಿನ್ದ ಹಿರಿಯಳು 128; ಜ್ಯೇಷ್ಠೆ 522). 7, N. of a Paṇḍita. = ಕಕ್ಕೋಕ. (Sk.).

**ಕೋಕಕುಚೆ kōka-kuce.** a female with a ruddy goose-like breast (Bp. 5, 32).

**ಕೋಕನದ kōkanada.** *the red lotus* (ಕೆನ್ದಾವರೆ Hlā.; Nn. 17; ಅರುಣಾಬ್ಜ, ಕೆಮ್ಪುದಾವರೆ Mr. 419).

**ಕೋಕನದಚ್ಛವಿ kōkanada-c-chavi.** *the colour of the red lotus, crimson.*

**ಕೋಕನದವೈರಿ kōkanada-vairi.** the moon. 2, a certain metrical foot (Ch.).

**ಕೋಕಶಾಸ್ತ್ರ kōka-śāstra.** = ಕಕ್ಕೋಕಶಾಸ್ತ್ರ. N. of a very elaborate treatise on the art of love, ascribed to a Paṇḍita Kōka. (Mhr., My.).

**ಕೋಕಿ kōki.** = ಕೋಕ No. 2. (J. 19, 33; 29, 48; ಕೋಕ, ಚಕ್ರವಾಕ Si. 174).

**ಕೋಕಿಲ kōkila.** = ಕೋಗಿಲ, ಕೋಗಿಲೆ. *the cuckoo, Cuculus indicus.*

**ಕೋಕಿಲನಿನದ kōkila-ninada.** the cry or note of the cuckoo (ಪುಗಿಲ್ಪುಗಿಲೆನಿಪ ರಾವಂ Ct. II, 93).

**ಕೋಕಿಲರವ kōkila-rava.** = ಕೋಕಿಲನಿನದ. 2, the fifth note of the musical scale or gamut (ಪಂಚಮ Ct. II, 93).

**ಕೋಕಿಲಸ್ವನ kōkila-svana.** = ಕೋಕಿಲನಿನದ. see ಕುಕಿಲ್.

**ಕೋಕಿಲಾಕ್ಷ kōkila-akṣa.** *the plant Asteracantha longifolia* Nees. *cf.* ಕೊಳಗುಳಿಕೆ.

**ಕೋಕಿಲಾರವ kōkila-ārava.** = ಕೋಕಿಲನಿನದ. see ಕುಕಿಲ್.

**ಕೋಕಿಲಾಲಾಪ kōkila-ālāpa.** = ಕೋಕಿಲಾರವ. see ಕುಕಿಲ್.

**ಕೋಗಿಲ kōgila.** = ಕೋಗಿಲೆ. (S. Mhr.).

**ಕೋಗಿಲೆ kōgile.** Tbh. of ಕೋಕಿಲ. the cuckoo (Śmd. 364; Hlā.; Mr. 169; Nn. 73; Si. 173; ಪೊಕ್ಕುಱಿವಕ್ಕಿ, ಕೆಂಗಣ್ಣಲರ್ವಕ್ಕಿ, ಪರಪುಟ್ಟ, ಪಡಿಯುಱಿವಕ್ಕಿ Kk. 79; Śm. 28; C.). Cuculus tenuirostris (Bḍ.); Cuculus lathami (Bḍ.). [ತುಮ್ಬಿಗಳಿನೆ ತುಮ್ಬಿ ಕೋಗಿಲೆಯೆ ಬಗ್ಗಿಸೆ ಸುಗ್ಗಿಯೊಳೊಪ್ಪುವನ್ತೆವೋಲ್ Pb. 1, 8; Ap. 1, 23]. ಕಾಗೆ ಕೋಗಿಲೆಯ ಹಾಗಿದ್ದರೂ ರಾಗದಲ್ಲಿ ಭೇದವಿಲ್ಲವೇ? — ಕೋಗಿಲೆಯ ಸುತ್ತಲೂ ಕಾಗೆಗಳು ಕೂಡಿದ ಹಾಗೆ. — ಕಾಗೆ ಕರಿದಾದರೆ ಕೋಗಿಲೆ ಆದೀತೇ? (Prvs.). see ನೀರು–, ಸೊರ್ಕುಗೋಗಿಲೆ; Bp. 3, 79; J. 3, 24; 8, 4. 6. — ಕೋಗಿಲೆ ಯೆಲೆ. –ಎಲೆ. = ಕುವ್ವೆಯೆಲೆ. (My.). — ಕೋಗಿಲೇ ಗಿಡ. a plant of which the leaves are used instead of plates, etc. (My.).

**ಕೋಗೀರು kōgīru.** a cushion used as a saddle (C.; Mhr., H. ಖೋಗೀರ).

**ಕೋಚ್ kōc.** a coach (Si. 275). (E.).

**ಕೋಚ kōca.** bending from the right course, making crooked; contracting. see ಉತ್ಕೋಚ, ಸಂ–.

**ಕೋಚನ kōcana.** = ಕೋಚ. see ಸಂ–.

**ಕೋಚು kōcu.** = ಕೂಚಿ, ಕೂಚು 3, ಕೋಸು 2. the state of being crooked. (C.; *cf.* Sk. ಕೋಚ; Mhr. ಕೋಸ, deviation from squareness, as of an awning, wall, road, etc.). — ಕೋಚು ಭಟ್ಟ. a perverse, foolish, stupid bhaṭṭa; also N. (C.). ಓದಿ ಓದಿ ಮರುಳಾದ ಕೋಚುಭಟ್ಟ (Prv.).

**ಕೋಚು kōcu.** a couch (B. 4, 188). (E.).

**ಕೋಚುಮಾನ kōcumāna.** = ಕೋಚ್ಮೆನ್. a coachman. (My.; E.).

**ಕೋಚ್ಮೆನ್ kōcmen.** a coachman (ಬಣ್ಡಿ ಹೊಡೆವ ಆಳು Si. 278). (E.).

**ಕೋಟ kōṭa. 1.** = ಕೊಡತ 1, ಕೋಡು 2. coldness (ಕುಳಿರ್, ತಣ್ಣತು, ಕೋಡು, ಶೈತ್ಯ Śm. 36, o. r. ಕೋಟ್ಟ; ಕೋಡು, ತಣ್ಣತು, ಶೈತ್ಯ Kk. 23; T., M. ಕೋಟ್ಟ, crookedness, distortion; coldness, stiffness; see s. ಕೋಚು 1, and *cf.* ಚೊಟ್ಟ, etc.).

**ಕೋಟ kōṭa. 2.** N. of a bird (ವ್ಯಾಕುಲಿ, ಕಿರೀಟಚಾಪ Mr. 170, two MSS. ಕಿರೀಟ–). 2, N. of a golla (Bp. 9, 12; V. 14, 100).

**ಕೋಟ kōṭa.** crookedness. 2, a shed, a hut. 3, a fort. *cf.* ಕೊಟ್ಟ 1 & ಕೋಟೆ. 4, N. of a small village (Mg.).

**ಕೋಟಡಿ kōṭaḍi.** = ಕೊಟ್ಟಡಿ. a chamber.

**ಕೋಟರ kōṭara.** *the hollow of a tree* (ಮರದ ಪೊಟಲು Nr. 142).

**ಕೋಟರಪುಷ್ಪಿ kōṭara-puṣpi.** the plant Convolvulus argenteus (ವ್ಯಾಲಿ, ಎಮ್ಮೆವಳ್ಳಿ Mr. 148; Sk. also ಕೋಠರ–).

**ಕೋಟರಿ kōṭari.** *a naked woman;* Durgā.

**ಕೋಟಲಿಗ kōṭaliga.** a man who causes trouble (My.).

**ಕೋಟಲೆ kōṭale.** = ಕೋಟ್ಲೆ. trouble, affliction, pain (ನೋವು Bhn. 41; C.; Tu.; T. ಕೋಟ್ಟಾಲೈ; Te. ಗೊಡೆ; Te. ಕೋಡಾ ಡು, to be amazed or confounded; ಗೋಟಾಡು, ಗೋಜುಲಾಡು, to harass; M. ಕೋಟಿಚಿ, T. ಕೊಟ್ಚೈ, violence; bashfulness; grief; see ಕೋಡು 3). [ಕೋಟಲೆಗೊಳ್ವ ಕೌರವೇಶ್ವರನಂ Pb. 13, 102 va.]; (Cpr. 8, 55. 81); [Cv. 253; Bv. 268]. ಅಟ್ಟುಣ್ಬೋದು ಅಱು ಕೋಟಲೆ, ತಿರಿದುಣ್ಬೋದು ಪರಮಸುಖ (Prv.). see Grj. 8, 57; Bp. 51, 75; C. Bp. 3, 18; Bh. 1, 8, 94; 3, 18, 38; Abhā. 1, 34. 52; Jñs. 22, 54; V. 9, 81. — ಕೋಟಲೆಗೊಳ್. -ಕೊಳ್. to undergo pain, etc. (Abhā. 2, 104). — ಕೋಟಲೆಪಡು. -ಪಡು. to suffer pain, etc. (Abh. P. 16, 55).

**ಕೋಟವಿ kōṭavi.** *a naked woman;* Durgā.

**ಕೋಟಾ kōṭa.** = ಕೊಟ್ಟೆ 1. the intestines, etc. (My.).

**ಕೋಟಾನುಕೋಟಿ kōṭānukōṭi.** Tbh. of ಕೋಟ್ಯನುಕೋಟಿ. to be reckoned by crores, countless (C.; Mhr. ಕೋಟ್ಯಾನಕೋಟಿ). see Bp. 35, 55; 50, 59; 53, 73; C. Bp. 47, 14.

**ಕೋಟಿ kōṭi.** = ಕೋಡಿ. *the point or extreme part* (*cf.* ಕುಡಿ 5); the outer angle of the eye. 2, *the point or edge of a sword;* a dagger (ಸುರಗಿ, ಕಠಾರಿ Nn. 43). 3, *the end of a bow* (ಚಾಪದ ಅನ್ತ್ಯ, ಬಿಲ್ಲ ಕೊಪ್ಪು 43). 4, *an angle or corner.* 5, *the highest point, excellence, eminence.* 6, ornament, decoration (ಭೂಷಣ, ಆಭರಣ 43). 7, beauty (ಸೌನ್ದರ, ಚೆಲುವು 43). 8, mental elation or joy (ಮನದ ಉತ್ಸವ, ಮನೋತ್ಸಾಹ 43). 9, *a crore or ten millions* (ಗಣನೆ, ಲೆಕ್ಕಸಂಖ್ಯೆ 43). 10, a countless number (ಅಗಣಿತ, ಲೆಕ್ಕಿಸ ಬಾರದುದು 43). 11, war (ಸಂಯುಗ, ಕಾಳೆಗ 43). 12, the hollow of a tree, a cave, etc. (ಮರದ ಪೊಟೆ ಮೊದಲಾದ ಗುಹೆಗಳ್ 43). 13, a division or branch (Mhr., My.; see ಉದ್ಭಿಜ್ಜ-, ಖನಿಜ-, ಪ್ರಾಣಿ-). ಕೋಟಿಭಾಗ್ಯವಿದ್ದವ ನಾದರೂ ಕಡೆಗೆ ಕಾಡಿನಲ್ಲೇ [cremation ground] ಇರಿಸುತ್ತಾರೆ.—ಕೋಟಿ ವರಹಾ ಕೊಟ್ಟರೂ ಕೋಮಟಿಯ ಸಾಕ್ಷಿ ನಮ್ಬ ಕೂಡದು (Prvs.). see ಪಿಳ್ಳು.

**ಕೋಟಿಕ kōṭika.** forming the highest point, top or summit of anything (Abh. P. 14, 188 va.).

**ಕೋಟಿಪಾತ್ರ kōṭi-pātra.** *a rudder* (ಅರಿತ್ರ, ನಾವೆಯ ಸೋಗೆ Hlā.; ಹಡ ಗಿನ ಮುಖ Mr. 408).

**ಕೋಟಿಮಂತ್ kōṭi-mat.** furnished with a point. (Cpr. 6, 5).

**ಕೋಟಿವರ್ಷೆ kōṭi-varṣe.** *the plant Medicago esculenta* Rottl. Roxb. (Trigonella corniculata Lin.).

**ಕೋಟಿಶ kōṭiśa.** = ಕೋಟೀಶ. *a harrow* (ಮಡಿಕೆ Mr. 370, o. r. of one MS. ಮಲಿಕೆ, another ಹಲಿಕೆ). see ಹಲಿಕೆ; ಕೊಡತಿ.

**ಕೋಟೀರ kōṭīra.** *a crest, a diadem.*

**ಕೋಟೀಶ kōṭīśa.** *a harrow.*

**ಕೋಟೆ kōṭe.** = ಕೋಣ್ಟೆ, ಗೋಡೆ. Tbh. of ಕೋಟ or ಕೋಟ್ಟ. a mud-wall, a wall round a town, a rampart; a fort (ವಪ್ರ, ಶಾಲ, ಪ್ರಾಕಾರ Hlā.; ವರಣ, etc. Si. 107; ಶಾಲ Nn. 20. 61. 121; ಪರಿಧಿ 97; ವಪ್ರ, ಪುರಭಿತ್ತಿ, ಶಾಲ Mr. 191; C.; M. ಕೋಡು, ಕೋಟ್ಟೆ; T. ಕೋಡು, ಕೋಟ್ಟೈ). ಕೋಟೆ ಹೋದ ಮೇಲೆ ಪಹರೆ ಕಾದರು.—ಕೋಟೆಯ ದೇವರಿಗೆ ಓಟೆಯ ದೀಪ (Prvs.). ಕೋಟೆಯ ತೆನೆ (ಕಪಿಶೀರ್ಷ, ಕೋಟೆಯಗ್ರ Nn. 149; Bp. 16, 11). see V. 4, 33; C. Bp. 42, 13; J. 3, 18; Dp. 1, 2; ರಾಯಗೋಟೆ. — ಕೋಟೆಗಲ್ಲು. -ಕಲ್ಲು. a wall-stone of a fort (Bp. 16, 5). — ಕೋಟೆಗಾಯ್. -ಕಾಯ್. to guard a fort (V. 10, 12). ಕೋಟೆಗಾವಲ್. -ಕಾವಲ್. a fort-guard (J. 17, 9). — ಕೋಟೆದೆನೆ. -ತೆನೆ. = ಕೋಟೆಯ ತೆನೆ. see ಹೊಂಗೋಟೆದೆನೆ.— ಕೋಟೆವಿರಿ. -ಬಿರಿ. a crack in a wall or rampart (Bp. 58, 44).

**ಕೋಟೇಶ್ವರ kōṭa-Iśvara.** N. of Śiva and of a village. see Prv. s. ವಣ್ಣಾರ.

**ಕೋಟ್ಟ kōṭṭa.** = ಕೊಟ್ಟ 3, ಕೋಟೆ, ಕೋಟೆ. *a fort, a stronghold.*

**ಕೋಟ್ಟಾರ kōṭṭāra.** a stronghold of thieves or robbers (ಕಳ್ಳರಿಪ್ಪ ಆಲಯ Mr. 198). 2, the stairs of a pond. 3, rising ground (ಬೆಟ್ಟ ಮೊದಲಾದ ತೆವರು Nr.). 4, a libertine.

**ಕೋಟ್ಯಾನ್ತರ kōṭyāntara.** (*i. e.* ಕೋಟ್ಯನ್ತರ). = ಕೋಟಾನುಕೋಟಿ. (C.).

**ಕೋಟ್ಲೆ kōṭle.** = ಕೋಟಲೆ. trouble, affliction.

**ಕೋಠ kōṭha.** *white leprosy with round spots.* 2, ringworm, impetigo.

**ಕೋಠಿ kōṭhi.** a granary; a factory, a bank; a warehouse (Mhr.; Cb. 20; Si. 106; My.).

**ಕೋಡ kōḍa.** — ಕೋಡಬಳೆ. a kind of salted cake in the form of a ring fried in oil or ghee (C.; Te. ಕೋಡಬಡಿ; Mhr.). — ಕೋಡವಳೆ. = ಕೋಡಬಳೆ. (My.).

**ಕೋಡಗ kōḍaga.** a monkey, an ape (ಬಲೀಮುಖ, ಮರ್ಕಟಕ, ಕಪಿ, ವಾನರ, etc. Hlā.; Nr.; Mr. 161; C.; T. ಕೋಡರ, ಕೋಗು ಲ, ಕುರಂಗು; Tu. ಕೊಡಂಜಿ, ಕೊಡಂಜು, a large kind of ape). [ಸಿಂಹಾಸನದ ಮೇಗೇಱರ್ದ ಕೋಡಗಮುಮಂ Vr. 85, 27; Ap. 15, 34; ಕೋಡಗನ ಹುಲ್ಲು ಮುಸುಕಿದನ್ತೆ ಕೂಡಲಸಂಗಮದೇವಾ ನಿಮ್ಮ ಪರಿ Bv. 739]. ಕೋಡಗದ ಕೆಯ್ತ (ಕಾಪೇಯ Hlā.). ಕೋಡಗದ ಮೆಯ್ಯ ಬಣ್ಣ (ಶ್ಯಾವ, ಕಪಿಶ Nr.). see Bp. 22, 48; 29, 7; Rśv. 5, 55va.; J. 15, 20; 16, 33; Dp. 76, 3. [— ಕೋಡಗಗಟ್ಟು. -ಕಟ್ಟು. to tie one as if he were a monkey; to tie the hands from behind. ಕೋಡಗಗಟ್ಟುಗಟ್ಟಿ ತರ ಲಿನ್ನಾರಾರ್ಪರನ್ತಪ್ಪ ಪೊಚ್ಚಱ ಸಾಮನ್ತರೆ ಪೋಗಿಂ Pb. 5, 21].

**ಕೋಡಂಗಿ kōḍaṅgi.** an apish man : a buffoon, a harlequin (C.; M.; T., Te. ಕೋಣಂಗಿ; Tu.; T. ಕೋಟ್ಟಾಲೈ, ಕುಣಾ ಮ್ಬು, ಕೋಪ್ಪು, ಕೋರಣಿ, Te. ಕೋಡಿಗ, ಕೋಡಿಗೆ, M. ಕೋಪರಟ್ಟಿ, ಕೋಟ್ರಾಟ, ಕೋಮಾಳ, jesting, buffoonery). [ಕೋಡಂಗಿಯಾಟವ ನಾಡಿದ ಭಕ್ತಂಗೆ ಬೇಡಿತ್ತನೀವ ನಮ್ಮ ಕೂಡಲಸಂಗಮದೇವ Bv. 179].

**ಕೋಡಂಗಿತನ kōḍaṅgitana.** buffoonery (My.; Te. ಕೋ ಣಂಗಿತನ).

**ಕೋಡರತನ kōḍaratana.** (fr. ಕೋಟ್ಟಾರ). the state of a libertine and connection with him. ಧನದ ಕೋಡರತನಂ ನೂಕು! (J. 6, 26).

**ಕೋಡಿ kōḍi. 1.** (fr. ಕೊಡೆ 2?). (Śmd. 27). a passage to carry off excess of water, the outlet of a tank (ಜಲೋಚ್ಛ್ವಾಸ, ಪರಿವಾಹ Nr.; ನೀರಬಟ್ಟೆ Bhn. 4; Bh. 8, 24, 47; C.; T. ಕೋಡು, Te. ಕೋಟಿ, ಕೋಡು, a channel; T. ಕುಱುಮಿ, a sluice). ಕೆಱೆಯ ಕೋಡಿ (Śmd. 162). see Bp. 4, 11; 11, 35; B. 4, 184; ಇಕ್ಕೋಡಿ, ಕಡೆಗೋಡಿ. — ಕೋಡಿವರಿ. -ಪರಿ. to flow through the outlet of a tank : to flow in streams (Rām. 5, 9, 24; J. 23, 23).

**ಕೋಡಿ kōḍi. 2.** deficiency, defect, want (ಕೊಱತೆ Bhn. 4; Bh. 2, 13, 34; 3, 19, 37; Rām. 4, 2, 4; 6, 9, 20; J. 26, 64; *cf.* ಕೊಡಗ). — ಕೋಡಿಗಳೆ. -ಕಳೆ. to make light of, to disregard, to slight (Bh. 8, 26, 20; J. 18, 42). — ಕೋಡಿಗಾಣಿಸು. -ಕಾಣಿಸು. to show or point out a defect (Rām. 6, 50, 43).

**ಕೋಡಿ kōḍi. 3.** (Tu. ಕೋಡದಬ್ಬು, ಕೋಡಿ-, ಕೋಡೆ-, a demon worshipped by Pariahs; ಕೋಡಿ, a kind of flag, an image of garuḍa, basava, or other demi-god set upon a long post before

a temple; *cf.* ಗುಡಿ 2). — ಕೋಡೀ ಹಬ್ಬ. a certain festival. see Prv. s. ವಣ್ಣಾರ.

**ಕೋಡಿ kōḍi.** Tbh. of ಕೋಟಿ (Śmd. 338).

***ಕೋಡಿಸು kōḍisu.** to make cool. ತಣ್ಣನಿಯೊಳ್ಕೋಡಿಸು ತಿರ್ಪ ಬಿಜ್ಜಣಿಗೆಗಂ Ap. 1, 75.

**ಕೋಡು kōḍu. 1.** to be cool or cold (ಶೈತ್ಯ Śmd. Dh.; Abh. P. 16, 28; *cf.* ಕುಳಿರ್ 2; Tu.; M. ಕೋಡು, ಕೋಣು, to bend, to be crooked, twisted, awry; to feel very cold; T. ಕೋಡು, ಕೊಲು, to bend, inflect; ಕೋಟ್ಟು, to make crooked; see s. ಕೋಟ 1). [ಕೋಡುವ ಮೆಯ್ಯುಮಂ ಕಣ್ಡು ಪರಲೋಕ ಪ್ರಾಪ್ತನಾದುದನಱಿತು Pb. 2, 19 va.; Ap. 11, 74 va.]. see ಕುಳಿರ್ಕೋಡು.

**ಕೋಡು kōḍu. 2.** = ಕೋಟ 1. coldness (ಶೈತ್ಯ Ct. I, 38; ಕೋಟ, ತಣ್ಣತು, ಶೈತ್ಯ Kk. 23; ಕುಳಿರ್, etc. Śm. 36).

**ಕೋಡು kōḍu. 3.** to shrink; to fear (ಭಯ Śmd. Dh.; Te. ಕೋಡಾಡು, to be amazed or confounded; T. ಕೋಟ್ಟಿ, a timid, bashful person). see Śmd. 28; Grj. 4, 120 va.; 5, 69. 89; 8, 55 va.; Bp. 37, 39; Rśv. 11, 115; and s. ಕೋಟಲೆ.

**ಕೋಡು kōḍu. 4.** shrinking; fear (ಭಯ Śm. 94); a wonderful thing, a wonder (Bp. 24, 45.). see Śmd. s. ತಿರ್ದು 1. — ಕೋಡುನ್ತಳೆ. -ಂ-ತಳೆ. to shrink, to shrivel, etc. (ಸವೆ Ct. 1, 49).

**ಕೋಡು kōḍu. 5.** (fr. ಕುಡು 3). = ಕೋಲ್. a horn of animals; a tusk (ಶೃಂಗ Śmd. Dh.; Śm. 94; ಗೋ, ಶೃಂಗ Nn. 5; ಅಲಾವು, ಶೃಂಗ 26; ಶೃಂಗ, ವಿಷಾಣ 28; ಸಾರಂಗ, ಶೃಂಗ 34; ದನ್ತ, ಶೃಂಗ 81; ದಂಷ್ಟ್ರ, ವಿಷಾಣ, ದಾಡೆ 85; ಪ್ರಮಾಣ 139; ಅಲಾವು Mr. 498; Abh. P. 4, 119; Śsv. 3, 51. 55. 57; 4, 3; C.; T.; *cf.* ಕೊಮ್ಬು 2; Tbh. ಕೋಡು). [ಆನೆಯ ಕೋಡು ಬಾಗದೆಮ್ಬನ್ತೆ Pb. 7, 16 va.; ಬಲ್ಲಿತ್ತಱ ಕೋಡು ಕೂರಿತದನನ್ತುನ್ತೆನಲ್ಬರ್ಕುಮೇ Ap. 1, 25]. ಕೋಣನ ಕೋಡು (ಗವಲ Nr.). ಎಮ್ಮೆಯ ಕೋಡು (ಗವಲ Hlā.). see Śmd. 28; Bp. 29, 4; 32, 27: Abh. P. 13, 74; Rśv. 6, 11 va. 2, a point; the peak or top of a hill (T.; T., M. ಕುವಡು, a globe, round body; a hill; the peak of a hill; see s. ಕುಪ್ಪೆ 1; *cf.* Tbh. ಕೋಡು). ಬೆಟ್ಟದ ಕೋಡು (ಕೂಟ, ಶೈಲಶೃಂಗ Nr. *cf.* ಕೊಟ್ಟು). — ಕೋಡುಗಲ್. -ಕಲ್. -ಗಲ್ಲು. the top-stone: the peak of a hill. ಕೋಡುಗಲ್ಲು [ಕೋಡುಗಲ್ಲಿನ ಮೇಲೆ ಮಾಡುವ ತಪವು ಒನ್ದು ದಿನದ ಗುರುಸೇವೆಗೆ ಸರಿಯಲ್ಲ Cv. 1142]; (ಕೂಟ, ಶಿಖರ, ಶೃಂಗ Nr.; Mr. 97; C.; Rām. 6, 11, 7; J. 2, 65; B. 5, 136). — ಕೋಡುಂಗಲ್. -ಂ-ಕಲ್. = ಕೋಡುಂಗಲ್ಲು (Cpr. 5, 76 va.; 10, 82). — ಕೋಡುಂಗಲ್ಲು. -ಂ-ಕಲ್ಲು. = ಕೋಡುಗಲ್. (ಶೃಂಗ ಶಿಖರ, ಕೂಟ Hlā.). — ಕೋಡು ಮುಱುಕ ಬಳ್ಳಿ. the creeper Cynanchum pauciflorum R. Br. (Z.). — ಕೋಡುವೀಸ. the allowance of a vis of corn, etc. for every bullock-load that comes into a town, etc. (R.). — ಕೋಡೇಱು. -ಏಱು. a wound made with a tusk [ಪರಿದ ಸುಪ್ರತೀಕಂ ಕೆಯ್ಯಕಾಲ ಕೋಡೇಱುನೊಳ್ ಬಲಮನೆಲ್ಲಂ ಜವನೆ ಜವುಳಿದುಱುವನ್ತೆ ತೊಟ್ಟುಱುದುಱು ದು Pb. 11, 72 va.; ತಮೋಗಜದ ಕೋಡೇಱುನ್ದಮೇಂ ನೊನ್ದುದೋ ಹರಿಣಂ Ap. 12, 6]; (Cpr. 5, 39 va.; Abh. P. 13, 80).

**ಕೋಡು kōḍu. 6.** the branch of a tree (ಕೆಯ್, ಮರ ಗೊಮ್ಬು Kk. 19; Śm. 24; My.; T. ಕುವಡು, ಕೋಡು, ಕೊಲ್; *cf.* ಕೊಮ್ಬು 3). [ಮಾವಿನ ಬನ್ದ ಕೋಡೆ ಕೋಡಾಗಿರೆ Pb. 2, 15]. see Bp. 38, 39; ತುದಿಗೋಡು, ನಿಡುಗೋಡು. — ಕೋಡುಕಳ್ಳಿ. the milk-hedge, Euphorbia tirukalli L. (St. & Pl.). — ಕೋಡೊಲೆ. -ಒಲೆ. a kind of fire-place (My.; see ಒಲೆ 4); a subsidiary hearth.

**ಕೋಡು kōḍu. 7.** (fr. ಕುಡು 1). (Śmd. 250). giving; a gift (ಕೊಡುವ ಭಾವ Śm. 94; ದಾನ Nn. 85). [ವನ್ದಿ ಜನಕ್ಕೆ ಕೊಟ್ಟ ಕೋಡೆಡರದೆ Pb. 1, 99; ಮುಂಚಿದ ಕೋಡೇಱು ಬನ್ದ ತೊತ್ತಿನ ಮಗ ನಾ ನಯ್ಯಾ Bv. 354].

**ಕೋಡು kōḍu.** Tbh. of ಕೂಟ (Śmd. 338. 356. 364). — ಕೋಡ ಕೆಯ್. joined, *i. e.* both, hands (Bh. 6, 4, 67; Rām. 3, 8, 69). — ಕೋಡಿ ಡು. -ಇಡು. to become most excellent (Abh. P. 1, 23; Grj. 8, 25). — ಕೋಡುಗವಣೆ. -ಕವಣೆ. a pair of slings (Rām. 6, 11, 7).

**ಕೋಡೆ kōḍe.** west wind, cool wind (M., that is the hot land-wind for the Mysore, Telugu, and Tamiḷ countries); the hot season (March-May, My.). — ಕೋಡೆಗದ್ದೆ. a paddy-field that yields a crop in the hot season (My.).

**ಕೋಣ್ kōṇ.** Tbh. of ಕೋಣ (Śmd. 365).

**ಕೋಣ kōṇa.** a male buffalo (ಮಹಿಷ, ಸೈರಿಭ, ರಕ್ತಾಕ್ಷ, etc. Hlā.; Mr. 162; C.; Te.; Tu. ಗೋಣೆ; M. ಕೂಳ, a young male buffalo; Sk. ಗವಲ; Sk. ಗೋಣ, an ox). ಕೋಣನು (ಪುನ್ನಾಗ, ಉ ಲಾಯ Nn. 61; ಖುಪುರ 102). ಕೋಣಂ (Śmd. 148). ಕೋಣನ ಮುನ್ದೆ ಕಿನ್ನರಿ ಬಾಱಿಸಿದ. — ಕೋಣ ಗದ್ದೇ ಉತ್ತರೆ ಮೊಸರೋಗರಾ ಇಕ್ಕೋರೋ? — ಎತ್ತು ಏಱಿಗೆ ಎಟಿದರೆ ಕೋಣ ನೀರಿಗೆ ಎಟಿಯುತ್ತದೆ. — ಕೋಣ ಬೆಳ ದರೆ ಆನೆ ಆದೀತೇ? (Prvs.). ಕೋಣ ಬಲ್ಲುದೆ ವೇದವನ್ನೋದಿ ಪಠಿಸಲಿಕೆ? (Dp. 76). see Śsv. 3, 56; J. 5, 72; B. 1, 18. 28; 5, 22; ಅಡವಿಯ–, ಕಾಡ–; Prv. s. ಪ್ರಾಣ. 2, a foolish man (My.). — ಕೋಣದ ಬಕ್ಕರಿ. = ಕೋಣದ ಬಳ್ಳಿ. (Z.). — ಕೋಣದ ಬಳ್ಳಿ. a leafless, shrubby creeper, Sarcostemma intermedium Dene. (Z.; My.).

**ಕೋಣ kōṇa.** = ಕೋಣ್, ಕೋಣೆ, ಕೋನ, (ಕೋಲೆ 2). *an angle, a corner;* an intermediate point of the compass. 2, *a drum-stick, an instrument for striking the cords of the lute,* etc. (*cf.* ಕುಡುಪು). 3, the sharp edge of a sword. 4, the planet Saturn (Mr. 38). 5, a stick, a club (*cf.* ಕೋಲ್).

**ಕೋಣಪ kōṇa-pa.** a guardian of a point of the compass; Nairṛita (My. Amara; Rām. 30, 12).

**ಕೋಣೆ kōṇe. 1.** a pitcher (ಗಳನ್ತಿಗೆ Kk. 47, Śs.; *cf.* ಗುಡಾಣ, ಗುಡುವನ).

**ಕೋಣೆ kōṇe. 2.** an inner apartment or chamber, a room (ಓವರಿ Kk. 71; Śm. 60; Śs.; C.; Tu., Te. ಕೋನೆ). [ಬಸದಿ ಯೊಳೊನ್ದು ಕೋಣೆಯೊಳೀ ಎಡೆಯೊಳ್ ನೀಮೊನ್ದು ಕೆಲದೊಳ್ ಮಗುೞದೆ Vr. 82, 28]. see B. 2, 35; 4, 57; 5, 205. 2, a kitchen (My.). — ಕೋಣೆವುಗಿಸು. -ಪುಗಿಸು. to cause to enter a chamber. ಮೂ ದೇವರುಮಂ ಕೋಣೆವುಗಿಸುಗುಮಸ್ ಅಸುರರ್ (Śmd. 267).

**ಕೋಣೆ kōṇe.** Tbh. of ಕೋಣ. a point of the compass (ಗೋಣ್ಣು Kk. 82).

**ಕೋಣ್ಟೆ kōṇṭe.** = ಕೋಟೆ. (Śmd. 384; Śm. 77). a fort, etc. [ನೆಗೆದು ಸೊಗಯಿಸುವ ಕೋಣ್ಟೆಯೊಳ್ಪಿನಿಂ Pb. 3, 22; Ap. 1, 71]. see Śmd. 69. 259; ತಳಿಗೋಣ್ಟೆ, ಹತ್ತುಗೋಣ್ಟೆ, ಹೆಡಗೆ–. — ಕೋಣ್ಟೆಗಾಳಗ. -ಕಾಳ ಗ. a fight on the ramparts (Cpr. 5, 104; C. Bp. 24, 25. 31).

**ಕೋತ kōta. 1.** = ಕೊಳುತ, ಕೊಳ್ಳುತ. (C.; B. 5, 300).

**ಕೋತ kōta. 2.** N. of a low-caste tribe on the Nīlagiri (*cf.* ಕೊಱತು; Sk. ಕೋಥ, putrefaction, corruption).

**ಕೋತ kōta.** reduction (My.; H.).

**ಕೋತಮ್ಬರಿ kōtambari.** Tbh. of ಕುಸ್ತುಮ್ಬುರಿ. see Prv. s. ಪೀತಾ ಮ್ಬರ.

**ಕೋತಲು kōtalu.** a led horse: something which is more than absolutely necessary (Br., H.); saving, laying up, in ಸಮ್ಬಳದಲ್ಲಿ ಸ್ವಲ್ಪ ಕೋತಲು ಉಳುಸುವದು (My.). — ಕೋತಲು ಮುತ್ಸದ್ದಿ. an extra clerk (My.). — ಕೋತಲುಸಮ್ಬಳ. extra pay (My.).

**ಕೋತಿ kōti.** an ape, a monkey (ಕಪಿ, ಪ್ಲವಂಗ, ಮರ್ಕಟ, etc. Si. 167; ಸಾಲಾವೃಕ 406; ಪ್ಲವಗ 410; C.; Tu., Te.; T. ಕೋಣ್ಣಿ). ಕೋತಿಗೆ ಭಂಗೀ ಇಕ್ಕಿದನ್ತೆ. — ಕೋತೀ ಕೆಯ್ಯಲ್ಲಿ ಹೂಮಾಲೆ ಕೊಟ್ಟ ಹಾಗೆ (Prvs.). see Prvs. s. ನೀತಿ, ನೇಯಿಗೆಯವ, ನೋತ, ಮತ; J. 16, 35; Dp. 55.

**ಕೋತು kōtu.** = ಕೋದು 2. P. p. of ಕೋ 3.

**ಕೋತು kōtu.** farming, tenanting, contracting, renting (S. Mhr.; Mhr. ಖೋತ, ಖೋತಿ). 2, = ಬಾರಕೋತು, barracks (My.).

**ಕೋದಣ್ಡ kōdaṇḍa.** a rope for punishment, suspended in schools, on which a boy is tied up with his hands clasped and which he is not permitted to loose (Te., T.; M. ಕೋದಾಣ್ಡ; My.).

**ಕೋದಣ್ಡ kōdaṇḍa.** = ಕೋಯಣ್ಡ. *a bow.* see ಬಿಲ್.

**ಕೋದು kōdu. 1.** P. p. of ಕೊಯ್ 1. (S. Mhr.).

**ಕೋದು kōdu. 2.** = ಕೋತು. P. p. of ಕೋ 3.

**ಕೋದ್ರವ kōdrava.** the grain Paspalum frumentaceum or P. scrobiculatum (ಉನ್ನಾಳ, ಹಾರಕ Mr. 373; see Si. 304).

**ಕೋದ್ರವೀಣ kōdravīṇa.** = ಕೌದ್ರವೀಣ. a kōdrava-field (Cpr. 1, 89).

**ಕೋನ kōna.** Tbh. of ಕೋಣ. (Mhr.; a corner, etc.; child-birth, delivery). — ಕೋನಮ್ಮ. -ಅಮ್ಮ. N. among Mahrattas (C.). — ಕೋನೇರಿ. -ಏರಿ. = ಕೋನೇರು. (R.; My. in the name of ಕೋನೇರಿಸೆಟ್ಟಿ). — ಕೋನೇರು. a stone-faced tank with steps on all sides (Te., R.).

**ಕೋಪ kōpa.** *passion, wrath, anger* (ಮುನಿಸು Nn. 142. 167; ಮೊರಹು Ct. I, 72; ಕಾಯ್ಪು, ಕಿನಿಸು I, 98; ಮುನಿಸು, ಮುಳಿಸು, etc. II, 27; ಮುನಿಸು, ಸೆಣಸು, ಒರಸೊರಸು, ಕಾಯ್ಪು Kk. 43). see ಒರಸೊರಸು, ಕನಲ್, ಕಾಯ್, ಕಾಯ್ಪು, ಕಾವುರ, ಕಿನಿಸು, ಕಿಸುಗಣ್ಣು, ಮುನಿಸು, ಮುಳಿ, ಮುಳಿಯಿಸು, ಸೀತಳ್, ಸೆಣಸು; ಕಡುಗೋಪ, ಬಲು-; Sp. s. ಪಾಪಕರ್ಮ. ಕೋಪ ತಾಪಾ ತನ್ನು, ತಾಪ ಬ್ರಹ್ಮೇತೀ ತನ್ನು (Prv.).

**ಕೋಪಕ್ರಮ kōpa-krama.** a passionate man. 2, ka-upa-krama. *Brahma's creation.*

**ಕೋಪಗಾತಿ kōpa-gāti.** a passionate woman, an angry woman (ಕೋಪನೆ, ಕೋಪವುಳ್ಳ ಸ್ತ್ರೀ Si. 182).

**ಕೋಪಗಾಱ kōpa-gāṟa.** a passionate man (My.).

**ಕೋಪಜ kōpa-ja.** *arising from passion.*

**ಕೋಪಜ್ಞ ka-upajña.** *Brahmā's creation.*

**ಕೋಪನ kōpana.** *inclined to anger, passionate.*

**ಕೋಪನೆ kōpane.** = ಕೋಪಗಾತಿ, q. v.

**ಕೋಪಶಿಖಿ kōpa-śikhi.** the flame of wrath (Rām. 3, 8, 68).

**ಕೋಪವಿಕಾರ kōpa-vikāra.** uncommon passion (ಸೀತಳ್ Kk. 52).

**ಕೋಪಾಗ್ನಿ kōpa-agni.** the fire of wrath (Śsv. 4, 57; J. 12, 22).

**ಕೋಪಾಟೋಪ kōpa-āṭōpa.** agitation or display of wrath (Śsv. 4, 39; J. 4, 56).

**ಕೋಪಿ kōpi.** *angry, passionate, wrathful.* see Bp. 22, 50; 61, 15; Prv. s. ನೇಣು.

**ಕೋಪಿಷ್ಠ kōpiṣṭha.** very passionate, irascible; an irascible man. (C.).

**ಕೋಪಿಷ್ಠಳು kōpiṣṭhaḷu.** a very angry woman (C.; B. 4, 185).

**ಕೋಪಿಸು kōpisu.** to become angry, etc. (ಅಮರ್ಷ Śmd. Dh.; ಕಿಸುಗಣ್ಣು Kk. 88). see Bp. 26, 16; 45, 8; 56, 30.

**ಕೋಪು kōpu.** dramatic gestures or attitudes (J. 17, 24; 24, 72; M., T. ಕೋಪ್ಪು, arrangement, nice order, method, etc.; Te. ಕೋಪು, a sort, kind, or variety; variation of music; see ಕೋ 3?). ಛತ್ತೀಸದೃಷ್ಟಿ ಚೌಷಷ್ಟಿಹಸ್ತಂಗಳಂ ಬಿತ್ತರಿಸುವದು ಕೋಪೆನಿಕ್ಕು (Mr. 82).

**ಕೋಪೋದ್ರೇಕ kōpa-udrēka.** excess of passion. see ಕೆರಳ್ಚು.

**ಕೋಮಟಿ kōmaṭi.** a Vaiśya shopkeeper (Bp. 25, 23; C.; Te.; T., M. ಕೋಮುಟ್ಟಿ; Te. ಕೋಪು, a mercantile house or firm). ಕೋಮಟಿ ಮೋಸ ಹೋಗುವದಿಲ್ಲ, ಮೋಸ ಹೋದರೆ ಹೇಳುವದಿಲ್ಲ. —ಕೋಟಿವರಹಾ ಕೊಟ್ಟರೂ ಕೋಮಟೀ ಸಾಕ್ಷಿ ನಮ್ಬ ಕೂಡದು (Prvs.). 2, a miser (My.).

**ಕೋಮಟಿಗ kōmaṭiga.** = ಕೋಮಟಿ. (C.). see Bp. 50, 39; Si. 298; B. 3, 33.

**ಕೋಮಟಿಗಿತ್ತಿ kōmaṭiga-itti.** a Kōmaṭi female (C.).

**ಕೋಮಟಿತನ kōmaṭitana.** the profession of a Kōmaṭi (My.). 2, covetousness (My.).

**ಕೋಮಲ kōmala.** ಕೋಮಳ. = ಕೋವಳ. *tender, soft;* bland, sweet, low; pleasing, beautiful (ನಿರ್ಗರುಳ Bhn. 61, sic !; ನಳನಳಿಕೆ Śm. 22). 2, unripe; unripe fruit (ಶಲಾಟು, ತಿರುಳುದೋರ್ವ ಮಿಡಿಗಾಯಿ Mr. 109). 3, water (ಉದಕ 404). 4, N. of two vṛittas (Ch.).

**ಕೋಮಲತರ kōmala-tara.** uncommonly tender, etc. (Bp. 38, 43).

**ಕೋಮಲತೆ kōmalate.** softness, agreeableness, etc. (Bp. 42, 25; Rām. 28, 24).

**ಕೋಮಲರುಚಿರ kōmala-rucira.** N. of a vṛitta (Ch.).

**ಕೋಮಲಾಂಗ kōmala-aṅga.** a man who has a beautiful body (Rām. 3, 4, 2; J. 11, 10).

**ಕೋಮಲಿತ kōmalita.** = ಕೋಮಲ. (J. 19, 21).

**ಕೋಮಲೆ kōmale.** = ಕೋಮಳೆ. a delicate, beautiful female. (Bp. 4, 27. 40; 12, 40; 32, 45; 42, 31; 44, 52).

**ಕೋಮಳೆ kōmaḷe.** ಕೋವಳ್, etc. Tbh. of ಕುವಲಯ. (ನೆಯ್ದಿಲ್ Kk. 85).

**ಕೋಮು kōmu.** caste, tribe (My.; Br.; Mhr., H. ಕೋಮ).

**ಕೋಯಷ್ಟಿ kōyaṣṭi.** *the lapwing;* a small white crane, the paddy-bird. see ಕೊಟ್ಟುಕ.

**ಕೋಯಷ್ಟಿಕ kōyaṣṭika.** *the lapwing;* etc. (ಕೀಚುಬಾಲದ ಹಕ್ಕಿ Si. 178).

**ಕೋರ kōra. 1.** = ಖೋರ. one who does, makes, performs, is occupied with anything bad, etc. (C. in compounds; H. ಖೋರು).

**ಕೋರ kōra. 2.** = ಕುವರ, etc. Tbh. of ಕುಮಾರ (Śmd. 361).

**ಕೋರಕ kōraka.** *a bud, an unblown flower* (ಹೂವಿನ ಮೊಗ್ಗೆ Nn. 102; ಮೊಗ್ಗೆ 164).

**ಕೋರಕಿತ kōrakita.** budded (Cpr. 1, 141; Abh. P. 3, 117 va.).

**ಕೋರಂಗಿ kōraṅgi.** *small cardamoms.*

**ಕೋರಡಿ kōraḍi.** the state of being unsubstantial, empty, vapid, etc. (Rām. 4, 3, 5; Mhr.).

**ಕೋರತನ kōratana.** the condition of one who does, anything bad, etc. (My. in compounds).

**ಕೋರದೂಷ kōradūṣa.** = ಕೋದ್ರವ. *the grain Paspalum scrobiculatum* Lin.

**ಕೋರದೂಷಕ kōradūṣaka.** *Paspalum scrobiculatum.*

**ಕೋರಮ್ಬ kōramba.** a gold or silver frontlet of idols (My.).

**ಕೋರಯಿಸು kōrayisu.** to be dazzled (My.; Bh. 4, 11, 10; Te. ಕೋರಗಿಂಚು, to dazzle the eyes). (ಶೂರ್ಪಣಖಿಯ) ಕಣ್ಣು ಕೋರಯಿಸಿದವು ಕೋಮಲಾಂಗನ ಕಾಯಕಾನ್ತಿಯಲಿ (Rām. 3, 4, 2).

**ಕೋರಯ್ಸು kōraysu.** = ಕೋರಯಿಸು. to be dazed or dazzled; to be confused or bewildered (Cpr. 10, 60).

**ಕೋರಾ kōrā.** new, just as made. 2, unbleached cotton cloth (My.; Te.). — ಕೋರಾನ್ನ. undressed corn, as given to Brāhmaṇas, Jaṅgamas, etc. (Mhr.; C.).

**ಕೋರಿನ್ದೆ kōrinde.** a kind of fragrant plant (ಜನಿ, ಜತೂಕೆ, ಜನನಿ, ಚಕ್ರವರ್ತಿನಿ, etc., ಚಕ್ರವರ್ತಿಸೊಪ್ಪು Si. 160; Te. ಕೋರಿನ್ದೆ, ಗೋರಿನ್ತೆ).

**ಕೋರು kōru.** silken thread covered with gold or silver (My.; H.). 2, a presidency (as Madras, My.; H.).

**ಕೋರೆ kōre.** crookedness; perverseness (My.; *cf.* ಕೋಸು 2; ಗೋಱೆ?). — ಕೋರೆಪಟ. a small flag as that with which a lance is adorned, and any similar one (My.).

**ಕೋಱ kōṟa.** = ಕೋಱೆ. see ಬಲುಕೋಱದಾಡೆ.

**ಕೋಱಡಿ kōṟaḍi.** = ಕೋಱಡೆ, etc. (Bh. 3, 12, 56).

**ಕೋಱಡೆ kōṟaḍe.** = ಕೊಱಡಾ. a whip (Si. 344).

**ಕೋಱಿ kōṟi.** = ಕೊಱ 2. a small (generally old) piece of cotton cloth, a rag (My.); a worn out blanket (S. Mhr.). — ಕೋಱಯಂಗಿ. -ಅಂಗಿ. a jacket made of a blanket as worn by the Oggas (S. Mhr.). — ಕೋಱಸೆಟ್ಟಿ. a Liṅgāyta tradesman who walks about with a bagful of articles and a kōṟi on his shoulder (S. Mhr.; such a man may become a rich merchant and retain his name). — ಕೋಱಹಣ್ಣು. a ripe mulberry (that is somewhat hairy, S. Mhr.). — ಕೋಱಹುಟ. a caterpillar (hairy like a blanket, S. Mhr.).

**ಕೋಱಿಕೆ kōṟike.** wishing, desiring (My.; ದೋಹದ, ಇಚ್ಛೆ, ಕಾಂಕ್ಷೆ, ಈಹೆ, ತೃಷ್, ಕಾಮ, etc., ಆಶೆ ಪಡುವಿಕೆ Si. 70). ಕೋಱಿಕೆಯುಳ್ಳವನು (ಕಾಮುಕ, ಕಾಮನ, etc. 359).

**ಕೋಱು kōṟu. (ಕೋರು). 1.** to purpose, to think, to wish, to desire (T., M.; Te. ಕೋರು; Tu. ಕೋರ್; *cf.* ಕುಱು1). ಅಬದ್ಧ ಬಗೆಯಂ ಕೋಱಿದೆ (Mr. 2).

**ಕೋಱು kōṟu. 2.** (fr. ಕೊಱೆ 1). (a cut off portion); a part, a portion, a share, in cultivation, etc. (S. Mhr.; Bp. 46, 14; Te. ಕೋರು; M. ಕೂಱು). see ಅರಗೋಱು, ಮೂಗೋಱು.

**ಕೋಱೆ kōṟe.** (fr. ಕೊಱೆ 1). = ಕೋಱ. cutting; sharpness, pointedness (Te. ಕೋಱೆ, ಗೋಱೆ). 2, a tusk (C.; Te.); a long pointed tooth; a fang [Tu. ಕೊಳಿ]. (M.; Tu. ಕೋರು to plough. Te., M. ಕೋಱು, to tear the flesh by thorns; cutting, tearing; *cf.* ಗೂಱು, ಗೋಱು 1), ಸಾವಿರ ಕೋಱೆಗಳುಳ್ಳ ಮಿಾನು (ಸಹಸ್ರದಂಷ್ಟ್ರ Si. 87). ಹಾವಿನ ಕೋಱೇ ದಾಡೆ (ಆಶಿಸ್ 463), see B. 4, 21. 22. 24; 5, 237. — ಕೋಱೆದಾಡೆ. a long pointed tooth (J. 27, 23). — ಕೋಱೆಮಿಾಸೆ. pointed whiskers (S. Mhr.). — ಕೋಱೆರುಮಾಲು. a turban with a point in front (My.). — ಕೋಱೆಹಲ್ಲು. = ಕೋಱೆ No. 2. (B. 4, 35. 316; My.).

**ಕೋರ್ಟು kōrṭu.** a court (C.; B. 4, 146; My. also ಕೋರಟು). [E].

**ಕೋಲ್ kōl. 1.** = ಕೊಲ್ 3, ಕೋಲು. a stick, a staff, a rod (Śmd. 58; ವೈಣವ, ಲಗುಡ, ರಮ್ಬು, ದಣ್ಡ, ಯಷ್ಟಿ Hlā.; ಡಂಗಿ Kk. 74; ಬಡಿ, ಡಂಗಿ, ಟಂಕೆ Śm. 31: ದಣ್ಡ 106; T., M.; *cf.* ಕುಯ್ಯ; Sk. ಕೋಣ); a roasting spit; a staff as a measure of length (My.; see Mr. s. ದಣ್ಡ). 2, an arrow (ಕಣೆ, ಸರಳ್, ಅಮ್ಬು Ct. II, 47; ಕಣೆ, ಪುಣುಮ್ಬು, ಸರಲ್, ಅಮ್ಬು Śm. 43. 106; Kk. 40; T., M.). [ಭೀಮನಂ ಮಱೆಮಾಡಿ ಕೋಲನೀಡಾಡಿ Pb. 2, 30 va.; ಎರಡು ಬಲದ ದಟಂಗಳ್ ... ತಟ್ಟುಪೊಟ್ಟೆನ್ದು ಕೋಲ್ಸುಟ್ಟಿ Pb. 10, 80 va.]. ಕೋಲಂ (Śmd. 84). ಕೇಲಂ ಮಾಡುವ ತಿಗುರಿಯ ಕೋಲನ್ತೆ ಪೋಲ್ (84). ಪೊನ್ನ ಕೋಲ್ (162). ಕೋಲ್ಗಳನ್ ಅನ್ತು ಅಯ್ದುವ ಪಾನ್ಥರ್ (Rśv. 8, 124). ಉರುಳ್ ಕೋಲ್ ಕಣ್ಣೆ ಮೊದಲಾದ ಮೃಗ ಪಕ್ಷಿಗಳ ಬನ್ಧನೋಪಕರಣಂಗಳು (ವಿತಂಸ Nr.). ಕಿಚ್ಚಂ ಪೊಸೆವ ಕೋಲ್ (ಅರಣಿ Mr. 260). ತೂಗುವ ಕೋಲ್ (ಸಮದಣ್ಡ 258). ಪುಸ್ತಕವಂ ಪೊತ್ತಿಪ್ಪ ಕೋಲ್ (ತವಣಿಕೆ 359). ಎರಡು ಕೋಲ್ ಆಗೆ ದಣ್ಡ ಮೆನಿಕ್ಕುಂ (325). see Abh. P. 13, 61; Bp. 18, 28. 29; Bh. 2, 13, 13; J. 4, 40; 7, 49; 12, 20. 22. 25. 39. 47; 28, 45; ಇಂಗೋಲ್, ಎತ್ತುಂ-, ಕಡೆ-, ಕುಡು-, etc., etc. — ಕೋಲ್ಗಱೆ. -ಕಱೆ. to rain arrows (J. 22, 11; 27, 38). — ಕೋಲ್ಗೊಳ್. -ಕೊಳ್. to get an arrow (J. 10, 24). — ಕೋಲ್ತುದಿ. -ತುದಿ. the point of an arrow (J, 13, 42. 48). — ಕೋಲ್ದುಸ. (=ಕೊಟ್ಟಸ). meat roasted on the spit (ಸುಣ್ಟಿಗೆ, ಸುಡುಬಾಡು Śs.). — ಕೋಲ್ದೊಡಿಸು. -ತೊಡಿಸು. to fix an arrow (J. 7, 41). — ಕೋಲ್ಮಱೆ. a shower of arrows (J. 12, 36).

**ಕೋಲ್ kōl. 2.** ಕೋಲು. = ಕೂಲ್. length, largeness, hugeness (My.; M.; Te. ಕೋಲು, ಕೋಲೆ, ಕೋಲನೆ). ಕೋಲಾದದು (ದೀರ್ಘ, ಆಯತ, ಉದ್ದವಾದದು, ನೀಳವಾದದು Si. 372; My.). — ಕೋಲ ಬಲೆ. = ಕೂಲ ಬಲೆ. (My.). — ಕೋಲು ಗುರು. the teacher (of the paṇḍus) Drōṇa (Bh. 7, 18, 46); the word might be referred also to ಕೋಲು and mean "arrow-teacher". — ಕೋಲು ಬಲೆ. = ಕೋಲ ಬಲೆ. (My.). — ಕೋಲ್ವಲೆ. -ಬಲೆ. = ಕೋಲ ಬಲೆ, etc. (Śsv. 3, 24).

**ಕೋಲ್ kōl. 3.** = ಕಲ್ 3, etc. a raft, a float (T.; Te., Sk. ಕೋಲ). see ಹಱುಗೋಲ್.

**ಕೋಲ kōla.** ornament, decoration; form, figure, chiefly of masks, dresses, etc., (used also in devil-dances). 2, a devil dance (My.; M., T., Tu.; Te.: dance, *cf.* ಕೋಪು? see ಕಣ್ಗೋಲ). ಕಾಲಕ್ಕೆ ತಕ್ಕ ಕೋಲ (Prv.). 3, public procession, as on the birthday of children, as that of the bride and bridegroom, etc. (My.; T.).

**ಕೋಲ kōla.** = ಕ್ರೋಡ. *a hog.* 2, *a raft, a float* (*cf.* ಕೋಲ್ 3). 3, = ಕುವಲ, *the fruit of jujube* (ಬೋರೇ ಹಣ್ಣು G.). 4, a kind of weapon (*cf.* ಕೋಲ್ 1).

**ಕೋಲಕ kōlaka.** = ಕಕ್ಕೋಲಕ. *a kind of perfume* (ಗವಲಕ ಚೂರ G.). 2, *black pepper.*

**ಕೋಲಜ್ಜಿ kōlajji.** = ಕೂಲಜ್ಜಿ, ಕೊಲಜಿ, etc. see ಅಡುಗೋಲಜ್ಜಿ.

**ಕೋಲದಲ kōla-dala.** *a kind of perfume* (= ನಖಿ).

**ಕೋಲಮ್ಬಕ kōlambaka.** *the body of a lute, the whole of it except the strings.*

**ಕೋಲವ kōlava.** long pepper? see ಕೋಲೆ.

**ಕೋಲವಲ್ಲಿ kōla-valli.** a plant with a pungent fruit resembling pepper, *Pothos officinalis* Roxb.

**ಕೋಲಾಱ kōlāṟa.** kolar (My.). ಕೋಲಾಱತಟ್ಟು. an inferior horse, a country pony (My).

